

# ದಕಾಯಿದ ಯುವರಾಜ

ಹಚ್ಚ ಹಸಿರಿನಿಂದ ಸೊಗಸಾಗಿ ಮಿರುಗುವ ಗುಡ್ಡ ಬೆಟ್ಟಗಳ ಕೆಳ ಭಾಗದಲ್ಲಿರುವ ಶಾಂತಿಪುರವು, ಹೆಸರಿಗೆ ತಕ್ಕ ಹಾಗೆಯೇ ತುಂಬಾ ಪ್ರಶಾಂತತೆಯ ನಗರ ವಾಗಿತ್ತು. ಸುಮೇಧ ರಾಜ್ಯದ ರಾಜಧಾನಿಯೇ ಈ ಶಾಂತಿಪುರ. ಇದುವರೆಗೂ ಸುಮೇಧ ರಾಜ್ಯ ವನ್ನು ಪರಿಪಾಲಿಸಿದ ರಾಜರು ಆ ನಗರವನ್ನು ಶೋಭಾಯಮಾನವಾಗಿ ಕಾಣುವಂತೆ ರೂಪಿಸುತ್ತ, ಆಲಯಗಳನ್ನು ನಿರ್ಮಿಸಿದ್ದರು, ತಟಾಕಗಳನ್ನು ತೋಡಿಸಿದ್ದರು, ಉದ್ಯಾನವನಗಳನ್ನು ಏರ್ಪಡಿಸಿದ್ದರು. ಸುಗಮವಾದ ಬೀದಿಗಳನ್ನು ಹಾಕಿಸಿದ್ದರು. ಬೀದಿಗಳ ಇಕ್ಕೆಲಗಳಲ್ಲಿ ಸಾಲು ಮರಗಳನ್ನು ನೆಡಿಸಿದ್ದರು.

ಪ್ರಸ್ತುತವಲ್ಲಿ ಸುಮೇಧವನ್ನಾಳುವ ರಾಜನು ಶಾಂತಿದೇವ. ಇವನ ಪರಿಪಾಲನೆಯಲ್ಲಿ ನಗರದ ಪ್ರಜೆಗಳು ಮಾತ್ರವಲ್ಲದೆ, ರಾಜ್ಯದೊಳಗಿನ ಪ್ರಜೆ ಗಳೆಲ್ಲರೂ ಸಿರಿಸಂಪದ, ಸುಖಶಾಂತಿಗಳಿಂದಿರುವಂತೆ ಮಾಡಲು ಮನಸ್ಸುಗೊಟ್ಟು ಕೆಲಸ ಮಾಡುತ್ತಿದ್ದನು ಶಾಂತಿದೇವ ಮಹಾರಾಜ.

ಈ ವಿಷಯವನ್ನು ಕುರಿತು ಮಾತಾಡುತ್ತ, ಒಂದು ದಿನ ಸೇನಾಧಿಪತಿಯಾದ ವೀರಸಿಂಹನು, ಶಾಂತಿದೇವ ರಾಜನೊಂದಿಗೆ, " ಮಹಾಪ್ರಭುಗಳೇ, ನಮ್ಮ ರಾಜ್ಯದ ಅಭಿವೃದ್ಧಿ ಕಾರ್ಯಗಳಿಗೆ ಸಂಪತ್ಸಂಗ್ರಹ ಮುಖ್ಯವಾಗಿದೆ. ಅದನ್ನು ಹೆಚ್ಚಿಸಲಿಕ್ಕೆ ನೆರೆಹೊರೆಯ ರಾಜ್ಯಗಳ ಮೇಲೆ ದಂಡೆತ್ತುವುದೇ ಒಳ್ಳೆಯದು ಹಾಗು ಸುಲಭವಾದ ಮಾರ್ಗವಾಗಿದೆ. ಒಂದೇ ಏಟಿಗೆ ರಾಜ್ಯದ ವಿಸ್ತರಣೆಯೂ, ಆ ರಾಜ್ಯದೊಳಗಿನ ಸಂಪತ್ತುಗಳೂ ಸಹ ನಮ್ಮದಾಗಿ ಬಿಡುತ್ತವೆ" ಎಂದನು.

ಅದಕ್ಕೆ ರಾಜನು ಮುಗುಳ್ನಗು ಮಿನುಗಿಸಿ, " ಸಾರ್ಥಕನಾಮನಾದ ವೀರಸಿಂಹಾ, ನೀನು ಹೇಳು ವಂತೆ ಅದು ಸರಿಯಾದ ಮಾರ್ಗವಾಗದು. ನೆರೆ ಹೊರೆಯ ರಾಜ್ಯಗಳನ್ನು ಕೊಳ್ಳೆ ಹೊಡೆಯುವು ದಕ್ಕೂ ನೀನು ಹೇಳಿದುದಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಹಾಗೆ ಕೊಳ್ಳೇ ಹೊಡೆದ ಸಂಪತ್ತು ನೆಲೆಯಾಗಿ ನಿಲ್ಲುವುದೂ ಇಲ್ಲ. ಅದು ಸುಲಭವಾಗಿ ದೊರೆಯುವ

Scanned by CamScanner

ಆನಂದಿಸುವಂತಹ, ಎಲ್ಲಾ ಜನರೂ ಯಾವ ಭಯವೂ ಇಲ್ಲದೆ ನಿಶ್ಚಿಂತೆಯಿಂದ ಹಾಯಾಗಿ ಕಾಲ ಕಳೆಯುವಂತಹ ಅದ್ಭುತವಾದ ಪ್ರಪಂಚವನ್ನು ಕಾಣುವಂತಹ ಕನಸನ್ನು ನಾನು ಕಾಣುತ್ತಿದ್ದೇನೆ. ಅದಕ್ಕಾಗಿಯೇ ನಮ್ಮ ಸೇನೆಗಳನ್ನು ಪ್ರಜೋಪಯೋಗವಾದ ಕಾರ್ಯಗಳಿಗೇ ಉಪಯೋಗಿಸಬೇಕೆನ್ನುತ್ತೇನೆ. ನಮ್ಮ ಸೈನಿಕರ ಸಹಾಯದಿಂದ ಅಗತ್ಯವಾದ ಕಡೆಗಳಲ್ಲಿ ನದಿಗಳ ಮೇಲೆ ಸೇತುವೇ ಕಟ್ಟಿಸೋಣ. ನದಿಗಳಿಲ್ಲದ ಕಡೆಗಳಲ್ಲಿ ಕಾಲುವೆಗಳನ್ನು ಅಗೆಸೋಣ. ಬೀದಿಗಳ ಎರಡು ಬದಿಗಳಲ್ಲಿಯೂ ಫಲವೃಕ್ಷಗಳನ್ನು ನೆಡಿಸೋಣ. ಧಾನ್ಯಗಳ ರಾಶಿಗಳು ದೊಡ್ಡದಾಗುವ ಹಾಗೆ ಹೊಲಗದ್ದೆಗಳಲ್ಲಿ ದುಡಿಯುವ ರೈತರಿಗೆ ನಮ್ಮ ಸೈನಿಕರಿಂದ ಸಹಾಯ ಮಾಡಿಸೋಣ. ಆಗ ಅವರಿಗಾಗಿ ಮಾಡುವ ಖರ್ಚು ವ್ಯರ್ಥವಾಗುವುದಿಲ್ಲವಷ್ಟೆ?..." ಎಂದು ರಾಜನು ಉದ್ದಕ್ಕೆ ಹೇಳಿಕೊಂಡೇ ಹೋದನು.

ಆಗ ವೀರಸಿಂಹನು ರಾಜನ ಮಾತಿಗೆ ಅಡ್ಡಕಟ್ಟಿ, "ಅದ್ಭುತ ಮಹಾರಾಜರೇ, ಅತ್ಯದ್ಭುತ! ಇನ್ನು ಮೇಲೆ ನನ್ನ ವಶದಲ್ಲಿರುವ ಸೈನಿಕರಿಗೆ, ಹಸುಗಳ ಹಾಲು ಹಿಂಡಲು ಕಲಿಯುವಂತೆ ಅಪ್ಪಣೆ ಮಾಡುತ್ತೇನೆ, ಹೆಂಗುಸರಿಗೆ ಮನೆ ಬಳಿಯುವುದು, ಅಡಿಗೇ, ನೀರು ಮುಂತಾದ ಕೆಲಸಗಳಲ್ಲಿ ಸಹಾಯ ಮಾಡಬೇಕೆಂದು ಕಟ್ಟಳೆ ವಿಧಿಸುತ್ತೇನೆ" ಎಂದನು ಕೋಪ ಬೆರೆತ ಧ್ವನಿಯಲ್ಲಿ.

ರಾಜನು ಮತ್ತೆ ನಗುವರಳಿಸಿದನು. ಸೇನಾಧಿಪತಿ ರಾಜನಿಗಿಂತ ಒಂದೆರಡು ವರ್ಷ ಚಿಕ್ಕವನು. ಆದುದರಿಂದ ರಾಜನಿಗೆ ಅವನ ಮೇಲಿರುವ ತುಂಬಾ ಮಮತೆಯ ದ್ಯೋತಕವೇ ಆ ನಗು.

"ಅಪ್ಪಾ, ವೀರಾಧಿವೀರನೇ, ಹೆಂಗುಸರಿಗೂ, ಪಶುಪಾಲಕರಿಗೂ ಸಹಾಯ ಮಾಡುವುದು ಹೀನ ಕೆಲಸವಲ್ಲವಪ್ಪಾ. ಇನ್ನೊಬ್ಬರ ಪ್ರಾಣ ತೆಗೆದು



ಅವರ ಆಸ್ತಿಪಾಸ್ತಿಗಳನ್ನು ಅಪಹರಿಸುವುದಕ್ಕಿಂತ ಇದು ಎಷ್ಟೋ ಮೇಲಾದ ಕೆಲಸವಲ್ಲವೇ? ವೀರಯೋಧನಾದ ನಿನಗೆ ಅದೆಲ್ಲಾ ಹೀನವೆಂದು ತೋರಿದರೂ, ಸ್ವಲ್ಪ ಸಮಾಧಾನ ಮಾಡಿಕೊಂಡು, ನಿಧಾನದಲ್ಲಿ ಆಲೋಚಿಸಿದರೆ ಶಾಂತಿಯ ಬೆಲೆ ನಿನಗೇ ಅರ್ಥವಾಗುತ್ತದೆ" ಎಂದನು ರಾಜ.

ಆ ಸಮಯಕ್ಕೆ ಅಲ್ಲಿಗೆ ಮಂತ್ರಿ ಬಂದುದರಿಂದ, ವೀರಸಿಂಹನು ಆ ಸಂಗತಿಯನ್ನು ಅಲ್ಲಿಗೆ ಬಿಟ್ಟು, ಅಲ್ಲಿಂದ ಎದ್ದು ಹೊರಟು ಹೋದನು. ಶಾಂತಿದೇವ ರಾಜನು ಬೇರೊಂದು ವಿಷಯವನ್ನೆತ್ತಿ ಮಂತ್ರಿಯೊಂದಿಗೆ ಮಾತಿಗೆ ತೊಡಗಿದನು.

ಆ ದಿನ ರಾತ್ರಿ ಸೇನಾಧಿಪತಿ ವೀರಸಿಂಹನು, ದಳಾಧಿ ನಾಯಕರಾದ ತನ್ನ ಕೆಲವು ಮಂದಿ ಅನುಚರರನ್ನು ರಹಸ್ಯವಾದೊಂದು ಪ್ರದೇಶದಲ್ಲಿ ಸಮಾವೇಶಗೊಳಿಸಿ, "ನಾಳೆಯಿಂದ ಸೈನಿಕರೆಲ್ಲಾ ಖಡ್ಗಗಳನ್ನು ಮೂಲೆಗೆ ಹಾಕಿ ಹೊಲಗದ್ದೆಗಳಲ್ಲಿ ನೇಗಿಲು ಹಿಡಿಯ



Scanned by CamScanner



"ಗಟ್ಟಿಯಾಗಿ ಕೂಗಬೇಡಿ! ಗೋಡೆಗಳಿಗೂ ಕಿವಿಯಿದೆ!" ಎಂದು ಎಚ್ಚರಿಸಿದನು ವೀರಸಿಂಹ.

ಆದರೆ ವೀರಸಿಂಹನು ಎಷ್ಟೇ ಜಾಗ್ರತೆವಹಿಸಿ ಕೊಂಡಿದ್ದರೂ ಅವನ ರಹಸ್ಯಾಲೋಚನೆಯ ಸುದ್ದಿ ಚಾರರ ಮೂಲಕ ಶಾಂತಿವರ್ಮ ರಾಜನಿಗೆ ತಿಳಿಯಿತು. ವೀರಸಿಂಹನದು ರಾಜನಿಗೆ ವಿರುದ್ಧ ವಾದ ಆಲೋಚನೆ ಎಂದಷ್ಟೇ ಗೊತ್ತಾಯಿತಲ್ಲದೆ ಅವನ ಪಥಕಗಳೇನೆಂಬುದು ತಿಳಿಯಲಿಲ್ಲ. ಅದೊಂದು ದೊಡ್ಡ ವಿಷಯವೆಂದು ರಾಜನು ಭಾವಿಸದೆ ಬಿಟ್ಟನು. ರಾಜನು ಸ್ವಭಾವತಃ ಒಳ್ಳೆಯವನಾದುದರಿಂದ ತನ್ನ ಬಂಧುವೇ ಆದ ವೀರಸಿಂಹನು ಕೆಟ್ಟುದಾಗುವಂತಹ ಘೋರ ಕೃತ್ಯಗಳಿಗೆ ಕೈ ಹಾಕುವನೆಂದು ಸ್ವಲ್ಪವೂ ಊಹಿಸದೆ ಹೋದನು. ಅಂತಹ ಅವನ ನಂಬುಗೆಯೇ ಘೋರ ಪರಿಣಾಮಕ್ಕೆ ಕಾರಣವಾಯಿತು.

ಆದರ ಮೇಲೆ ಆ ಸಮಯದಲ್ಲಿ ರಾಜ ಕುಮಾರನ ಎರಡನೆಯ ಜನ್ಮದಿನ ಸಮೀಪಿಸುತ್ತಿತ್ತು. ಮಂತ್ರಿಯೂ, ಇತರ ರಾಜೋದ್ಯೋಗಿಗಳೂ ಜನ್ಮ ದಿನೋತ್ಸವದ ಏರ್ಪಾಡಿನಲ್ಲಿ ಮಗ್ನರಾಗಿದ್ದಾರೆ, ತಳಿರು ತೋರಣಗಳನ್ನು ಎಲ್ಲೆಲ್ಲಿ ಹೇಗೆ ಕಟ್ಟಬೇಕು. ಯಾವ ಯಾವ ವಿನೋದಗಳನ್ನು ನಡೆಸಬೇಕು ಎಂಬುದರ ಮೇಲೆ ನೂರಾರು ಮಂದಿ ನಿಯೋಜಿಸ ಲ್ಪಟ್ಟಿದ್ದರು. ಬೆಡಿ, ಬಾಣ, ದುರುಸುಗಳ ಯೋಜನೆ ಯಲ್ಲಿ ಅನೇಕರು ತೊಡಗಿದ್ದರು. ಆ ಉತ್ಸವ ಮುಗಿದ ಮೇಲೆ ವೀರಸಿಂಹನೊಂದಿಗೆ ಮಾತಾಡ ಬಹುದೆಂದುಕೊಂಡು ರಾಜನು ಆ ವಿಷಯದ ಮೇಲೆ ಉದಾಸೀನ ಭಾವ ತಾಳಿದನು. ಅಂತಲೇ ವಿನೋದದ ಕಾಲವೇ ವಿಪರೀತಕ್ಕೂ ಎಡೆಯಾಯಿತು.

ಇದಿರು ನೋಡುತ್ತಿದ್ದ ಯುವರಾಜನ ಜನ್ಮ ದಿನವು ಬಂತು. ಆ ದಿನ ಬೆಳಂಜಾವದಿಂದಲೇ ಮಂಗಳ ವಾದ್ಯಗಳೊಂದಿಗೆ ವಿನೋದ ಕೂಟಗಳು ಪ್ರಾರಂಭವಾದವು. ರಾಜ ಪ್ರಾಸಾದದೊಳಗೆ ಅಂದ

ಬೇಕೆಂದು ಹೇಳುತ್ತಾನೆ ನಮ್ಮ ಮಹಾರಾಜ. ಬಾವಿಯ ನೀರು ಸೇದಿ, ಕೆರೆಯ ನೀರು ಹೊತ್ತು ತಂದು, ಹೆಂಗುಸರು ಅಡಿಗೆ ಮಾಡಲಿಕ್ಕೆ ನೀವೆಲ್ಲಾ ಸೈನಿಕರೊಂದಿಗೆ ಸೌದೆ ಒದಗಿಸಿಕೊಡಬೇಕೆಂದು ನಮ್ಮ ಮಹಾರಾಜನ ಮಾತು" ಎಂದನು.

ಅದನ್ನು ಕೇಳಿ ದಳ ನಾಯಕರಿಗೆ ಅತ್ಯಾಶ್ಚರ್ಯ ವಾಯಿತು. ವೀರಸಿಂಹನು ಸ್ವಲ್ಪ ಹೊತ್ತು ಸುಮ್ಮ ನಿದ್ದು, "ಮಿತ್ರರೇ, ನಾವೆಲ್ಲಾ ಒಳ್ಳೆಯ ಸೈನಿಕ ಶಿಕ್ಷಣ ಪಡೆದವರು, ಸಾಹಸ ಕಾರ್ಯಗಳೇ ನಮ್ಮ ಜೀವ, ಖಡ್ಗ ಚಾಲನೆಯೇ ನಮ್ಮ ರಕ್ತದೋಟದ ಪ್ರಧಾನ ಕರ್ತವ್ಯ. ಇದನ್ನು ಮರೆತು ನಮ್ಮ ಆಯುಧಗಳಿಗೆ ತುಕ್ಕು ಹಿಡಿಸಲು ಬಿಡುವೆವೇ? ಬಿಡಬಹುದೇ? ಏನು ಹೇಳುವಿರಿ? ನಿಮ್ಮ ಸ್ಪಷ್ಟ ಅಭಿಪ್ರಾಯವೇ ನನಗೆ ಬೇಕು" ಎಂದನು ಆವೇಶದಿಂದ.

"ಕೂಡದು! ಹಾಗೆ ಬಿಡಲೇಬಾರದು!" ಎಂದರು ಎಲ್ಲರೂ ಏಕಕಂಠದಿಂದ.



ವಾಗಿ ಅಲಂಕರಿಸಲ್ಪಟ್ಟ ವಿಶಾಲವಾದ ಮಂಟಪದಲ್ಲಿ ರಾಣಿ ತನ್ನ ಕಂದನನ್ನು ಮಡಿಲಲ್ಲಿ ಕುಳ್ಳಿರಿಸಿಕೊಂಡು ಉನ್ನತಾಸನದ ಮೇಲೆ ಆಸೀನಳಾಗಿದ್ದಳು. ಅವಳ ಹಿಂದೆ ಕೆಳದಿಯರೂ ಸೇವಿಕೆಯರೂ ನಿಂತಿದ್ದರು. ನೂರಾರು ಸ್ತ್ರೀ ಪುರುಷರು ತಂಡೋಪತಂಡಗಳಾಗಿ ರಾಣಿಗೂ ರಾಜಕುಮಾರನಿಗೂ ಶುಭಾಕಾಂಕ್ಷೆಗಳನ್ನು ತಿಳಿಸಲು ಬರುತ್ತಿದ್ದರು. ರಾಣೀ ವಾಸದಲ್ಲಿ ತುಂಬಾ ಸಂಭ್ರಮದ ಸಡಗರಗಳು !

ಹಾಗೆ ಬಹಳ ಹೊತ್ತು ಕುಳಿತುಕೊಳ್ಳಲು ರಾಣಿಗೆ ಕಷ್ಟವಾಗಿ ಮೈ ನೋಯಲು ತೊಡಗಿತು. ಆದರೂ ಪ್ರಜೆಗಳು ರಾಜನ ಮೇಲೆಯೂ, ರಾಜಕುಟುಂಬದ ಮೇಲೆಯೂ ತೋರಿಸುವ ಭಕ್ತಿ ವಿಶ್ವಾಸಗಳಿಗೆ ಅವಳು ಮುಗ್ಧಳಾಗಿ ಸಹಿಸಿಕೊಂಡಿದ್ದಳು. ರಾತ್ರಿಯಾದ ಮೇಲೆ ರಾಣೀವಾಸದ ಸಂಭ್ರಮ ಕಡಿಮೆಯಾಯಿತು. ರಾಣಿ ನಿದ್ರಿಸುವ ಮಗುವನ್ನೆತ್ತಿಕೊಂಡು ಶಯನಮಂದಿರವನ್ನು ಸೇರಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿದಳು.

ರಾತ್ರಿಯಲ್ಲಿ ನಡೆಯುವ ಬಾಣ ಬಿರುಸುಗಳ ಅದ್ಭುತ ರಮ್ಯಗಳನ್ನು ನೋಡಲು ರಾಜಭವನದ ಇದಿರಿನಲ್ಲಿ ಸಾವಿರಾರು ಜನರು ಗುಂಪುಗೂಡಿದರು. ಒಂದು ಕಡೆಯಲ್ಲಿ ನಾಟ್ಯಗಳು ನಡೆಯುತ್ತಿದ್ದುವು. ಮತ್ತೊಂದು ಕಡೆಯಲ್ಲಿ ಹಾಸ್ಯ ನಾಟಕ ನೋಡುತ್ತಾ ಜನರು ಬಿದ್ದು ಬಿದ್ದು ನಗುತ್ತಿದ್ದರು. ಮೊತ್ತದಲ್ಲಿ ವಾತಾವರಣವೆಲ್ಲಾ ಕೋಲಾಹಲವಾಗಿದ್ದಿತು. ಹಗಲಿಗಿಂತಲೂ ಹೆಚ್ಚಿನ ಜನರು ಈಗ ಬಂದಿದ್ದರು. ಬರುತ್ತಲೇ ಇದ್ದರು.

ಸಾಧಾರಣವಾಗಿ ರಾಜಪ್ರಾಸಾದದ ಎಲ್ಲಾ ದ್ವಾರಗಳಲ್ಲಿಯೂ ಯಾವಾಗಲೂ ಭಟರು ಕಾವಲು ಕಾದುಕೊಂಡೇ ಇರುತ್ತಾರೆ. ಆದರೆ ಉತ್ಸವದ ದಿನವಾದುದರಿಂದ, ಅಪ್ಪರ ಬರುಹೋಗುವಿಕೆಗಳು ವಿಪರೀತವಾದುದರಿಂದ ಬಾಗಿಲುಗಳನ್ನು ಧಾರಾಳವಾಗಿ ತೆರೆದಿಟ್ಟಿದ್ದರು. ಅಪ್ಪೇಪ್ಪರ ಮೇಲೆ ಶಾಂತಿದೇವರಾಜನಿಗೆ ಅಷ್ಟೊಂದು ನಂಬುಗೆ.

ರಾಣಿ ಮಲಗಲು ತಯಾರಾಗುವ ಸಮಯದಲ್ಲಿ ಶಾಂತಿದೇವ ರಾಜನು ವೇಗವಾಗಿ ಶಯನಮಂದಿರದೊಳಗೆ ಪ್ರವೇಶ ಮಾಡಿದನು. ಅವನ ವೇಗವನ್ನು ನೋಡಿ ರಾಣಿ ಆಶ್ಚರ್ಯಪಟ್ಟರೂ, ಸಣ್ಣಗೆ ನಗು ಅರಳಿಸಿದಳು. ಈ ಮೊದಲು ಎಂದೂ ರಾಜನು ಹೀಗೆ ಥಕ್ಕನೆ ಶಯನ ಮಂದಿರಕ್ಕೆ ಧಾವಿಸಿಕೊಂಡು ಬಂದವನಲ್ಲ !

"ನೀವು ತುಂಬಾ ಬಳಲಿ ಹೋಗಿದ್ದೀರಿ ಪ್ರಭೂ" ಎಂದಳು ರಾಣಿ.

ರಾಜನು ಏನೂ ಮಾತಾಡದೆ ಪಕ್ಕದಲ್ಲಿದ್ದ ಕೆಳದಿಯ ಕಡೆಗೆ ನೋಡಿದನು. ಕೂಡಲೇ ಅವಳು ಅಲ್ಲಿಂದ ಹೊರಗೆ ಹೋದಳು.

ರಾಣಿ ಉತ್ಕಂಠತೆಯಿಂದ, "ಏನಾಯಿತು? ಮಹಾರಾಜರೇ ?" ಎಂದಳು.



Scanned by CamScanner



ರಾಜನು ಮೌನ ಮುದ್ರೆಯಲ್ಲೇ ಬಾಗಿಲನ್ನು ಮುಚ್ಚಿ, ತಾಳ ಹಾಕಿ, ಹಣೆಯ ಬೆವರನ್ನು ಒರೆಸಿ ಕೊಳ್ಳುತ್ತ, "ದೇವೀ. ಏನು ನಡೆಯಿತೆಂಬುದನ್ನು ವಿವರಿಸಿ ಹೇಳಲು ಇದು ಸಮಯವಲ್ಲ. ನಮ್ಮ ಪ್ರಾಣಗಳಿಗೇ ಅಪಾಯ ಬಂದಿದೆ. ನೀನು ಈಗಿಂದೀಗಲೇ ರಹಸ್ಯ ಮಾರ್ಗದಲ್ಲಿ ತಪ್ಪಿಸಿಕೊಂಡು ಹೋಗಬೇಕು!" ಎಂದನು.

"ಏನೇನು? ರಹಸ್ಯ ಮಾರ್ಗದಿಂದಲೇ?" ಎನ್ನುವಾಗ ಆಶ್ಚರ್ಯಾತಿರೇಕದಲ್ಲಿ ದಿಗಿಲು ಬೆರೆತು ಅವಳ ಕಂಠ ರುದ್ಧವಾಯಿತು.

"ಹೌದು" ಎಂದನು ರಾಜ ಗಂಭೀರಭಾವದಲ್ಲಿ.

ರಾಣಿಗೆ ಸಿಡಿಲು ಬಡಿದಂತಾಗಿತ್ತು. ಶಯನ ಮಂದಿರದಿಂದ ಅರಣ್ಯದ ಮಧ್ಯಕ್ಕೆ ಹೋಗುವ ರಹಸ್ಯ ಸುರಂಗ ಮಾರ್ಗವಿತ್ತು. ಆ ರಹಸ್ಯ ಮಾರ್ಗದ ವಿಷಯ ಶಾಂತಿದೇವನಿಗೆ ಅವನ ತಂದೆಯೂ, ತಂದೆಗೆ ಅವರ ತಂದೆಯೂ ಹೇಳಿದ್ದರು. ಶಾಂತಿದೇವನು ಒಂದುಸಾರಿ ಮಾತ್ರ ತನ್ನ ರಾಣಿಗೆ ಆ ಮಾರ್ಗವನ್ನು ತೋರಿಸಿದ್ದನು. ಆಗ ಇಬ್ಬರೂ ಆ ಸುರಂಗ ಮಾರ್ಗದಲ್ಲಿ ಸ್ವಲ್ಪ ದೂರ ನಡೆದು ಹಿಂದಿರುಗಿದ್ದರು. ಆಗ ಕುತೂಹಲದಿಂದ ಹಾಗೆ ಹೋಗಿ ಬಂದರೇ ಹೊರತು, ಪ್ರಾಣಗಂಡ ಬಂದು ತಪ್ಪಿಸಿಕೊಳ್ಳುವಂತಹ ಸ್ಥಿತಿ ಬರುತ್ತದೆಂದು ಎಣಿಸಿದವರಲ್ಲ. ಸ್ವಪ್ನದಲ್ಲಿಯೂ ಕಂಡವರಲ್ಲ.

"ಇವತ್ತಿನ ಉತ್ಸವ ಸಮಯದಲ್ಲಿ, ನಾನು ಒಬ್ಬಳೇ ಹೋಗಬೇಕೆನ್ನುವಿರಾ?" ಎಂದಳು ರಾಣಿ ಭಯದಿಂದ ನಡುಗುವ ಸ್ವರದಲ್ಲಿ.

"ಅಲ್ಲ. ನಮ್ಮ ಮಗುವಿನೊಂದಿಗೆ ತಪ್ಪಿಸಿಕೊಂಡು ಹೋಗಬೇಕು" ಎಂದನು ರಾಜ.

"ನಿಮ್ಮನ್ನು ಇಲ್ಲಿ ಬಿಟ್ಟು ನಾನೊಬ್ಬಳೇ ಹೇಗೆ ಹೋಗಲಿ?" ಎಂದಳು ರಾಣಿ ಕಣ್ಣೀರಿಳಿಸುತ್ತ.

"ದೇವೀ, ನಮ್ಮ ಕಂದನಿಗಾಗಿ ನೀನು ಈ ತ್ಯಾಗವನ್ನು ಮಾಡಲೇಬೇಕು. ಶತ್ರುಗಳ ಗುರಿ ನನ್ನ ಮೇಲೆಯೇ ಇದ್ದರೂ, ನಾವು ಮೂವರನ್ನೂ ಹತಮಾಡಿ ಬಿಡಲಿಕ್ಕೇ ಅವರು ಪಥಕ ಹಾಕಿರುತ್ತಾರೆ. ನಾನೂ ಈಗ ನಿನ್ನೊಂದಿಗೆ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೆ ಹೇಗಾದರೂ ನಮ್ಮನ್ನು ಹಿಡಿಯಲು ಅವರು ಪ್ರಯತ್ನಿಸುತ್ತಾರೆ. ನಾನು ಇಲ್ಲಿಯೇ ಇದ್ದು ಹೋರಾಡಿದರೆ ತಾತ್ಕಾಲಿಕವಾಗಿಯಾದರೂ ಅವರು ನಿನ್ನನ್ನೂ, ಮಗುವನ್ನೂ ಮರೆತು ಬಿಡಬಹುದು" ಎಂದು ವಿವರಿಸಿದನು ರಾಜ.

ಹಾಗೆಯೇ ವೀರಸಿಂಹನು ತನ್ನ ಅನುಚರರೊಂದಿಗೆ ಕೂಡಿ ರಾಜ್ಯದ ಸಿಂಹಾಸನವನ್ನು ಕಬಳಿಸಲು ಮಾಡಿದ ತಂತ್ರಗಳನ್ನು ಕುರಿತು, ಈ ವಿನೋದ ಕೋಲಾಹಲದಲ್ಲೇ ರಾಜ ಕುಟುಂಬದ ನಾಶಕ್ಕೆ ತಲೆ ಹಾಕಿರುವುದನ್ನು ಕೂಡಾ ಸಂಕ್ಷಿಪ್ತವಾಗಿ ರಾಣಿಗೆ ಹೇಳಿದನು ಶಾಂತಿದೇವ.



Scanned by CamScanner

ಪ್ರಜೆಗಳಲ್ಲಿಯೂ, ಸೈನಿಕರ ಸಾಮಾನ್ಯ ನಡುವೆಯೂ ರಾಜನ ಮೇಲೆ ಅತ್ಯಂತ ಪ್ರೇಮಾದರಗಳಿದ್ದುವು. ಆದರೂ ಬಿಡಿಬಿಡಿಯಾಗಿದ್ದ ಲಕ್ಷಗಟ್ಲೆ ಪ್ರಜೆಗಳ ಅಭೀಷ್ಟಕ್ಕೆ ವಿರುದ್ಧವಾಗಿ ತಂತ್ರದಲ್ಲಿ ಒಗ್ಗಟ್ಟಾಗಿದ್ದ ಕೆಲವರೇ ವಿಜಯಶಾಲಿಗಳಾಗಬಹುದಷ್ಟೆ?

ಈಗ ರಾಜಪ್ರಾಸಾದದ ಎಲ್ಲಾ ದ್ವಾರಗಳೂ ಸೇನಾಧಿಪತಿ ವೀರಸಿಂಹನ ಸ್ವಾಧೀನದಲ್ಲಿರುವಂತೆ ಚಾರರ ಮೂಲಕ ರಾಜನಿಗೆ ತಿಳಿಯಿತು. ಇನ್ನೊಂದು ಅರ್ಧ ಗಂಟೆಯೊಳಗೆ ಯಾರೂ ಈವರೆಗೂ ಕಾಣದಂತಹ ಆಕಾಶ ಬಾಣಗಳ ವಿನೋದವು ನಡೆಯುಲಿದ್ದುವು. ಬಹುದೊಡ್ಡ ರಾಜಭವನದಂತಹ ಬೊಂಬೆಯು ಆಕಾರವು ಆಕಾಶಕ್ಕೆ ಹೋಗಿ ಭಯಂಕರ ಶಬ್ದದಿಂದ ಸಿಡಿದು ಚೆದರಲಿಕ್ಕಿತ್ತು. ಜನರೆಲ್ಲಾ ಅದನ್ನು ನೋಡುತ್ತಾ ಮೈಮರೆತಿರುವ ಸಮಯದಲ್ಲಿ ವೀರಸಿಂಹನೂ ಅವನ ಅನುಚರರೂ ರಾಜಪ್ರಾಸಾದದೊಳಗೆ ನುಗ್ಗಿ, ರಾಜಕುಟುಂಬದ ಸರ್ವನಾಶ ಮಾಡಲಿದ್ದಾರೆಂದು ರಾಜನಿಗೆ ಗೊತ್ತಾಗಿತ್ತು!

ರಾಣಿ ದುಃಖ ಗದ್ಗದಿತ ಸ್ವರದಲ್ಲಿ "ನಿಮ್ಮ ಅಂಗರಕ್ಷಕರೇನಾದರು?" ಎಂದಳು.

"ಉತ್ಸವ ವಿನೋದ ನೋಡಲು ಹೋಗಿರೆಂದು ನಾನೇ ಅವರನ್ನು ಕಳುಹಿಸಿಬಿಟ್ಟೆನು. ಈಗ ನಾನು ಈ ಅರಮನೆಯೊಳಗಿನಿಂದ ಹೊರಗೆ ಕಾಲಿಡಲಾರೆನು. ವೀರಸಿಂಹನ ಭಟರು ದ್ವಾರಗಳನ್ನು ಕಾಯುತ್ತಿದ್ದಾರೆ. ಅವರ ಕಣ್ಣಿಗೆ ಬೀಳದಂತೆ ಹೊರಬೀಳಲು ಸಾಧ್ಯವಿಲ್ಲ. ನಾವೀಗ ಇಲ್ಲಿ ಬಂದಿಗಳಾಗಿರುವ ಸಂಗತಿ ಹೊರಗೆ ಯಾರಿಗೂ ತಿಳಿಯದು" ಎಂದನು ರಾಜ ವಿಷಾದದ ನಗುವಿನಿಂದ.

"ಹಾಗಾದರೆ ಈಗ ನೀವು ಏನು ಮಾಡಬೇಕೆಂದಿದ್ದೀರಿ?" ಕೇಳಿದಳು ರಾಣಿ.

"ಅವರಿಗೆ ಸಿಕ್ಕದಂತೆ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತೇನೆ. ಸಾಧ್ಯವಾಗದಿದ್ದರೆ ಇದಿರಿಸಿ ಹೋರಾಡುತ್ತೇನೆ. ನಾನು ಹೇಳಿದ ಹಾಗೆ ನೀನು ಮಾಡಿದರೆ ನಮಗೆ ಅರ್ಧ ವಿಜಯವಾದಂತೆಯೇ ತಿಳಿ" ಎಂದನು ರಾಜ.



"ನಾನು ಏನು ಮಾಡಬೇಕೆಂದು ನಿಮ್ಮ ಆಜ್ಞೆ?" ಎಂದು ಸ್ವಲ್ಪ ದೃಢ ಸ್ವರದಲ್ಲಿ ಕೇಳಿದಳು ರಾಣಿ.

"ದೇವೀ, ಕಾಲಯಾಪನೆ ಮಾಡದೆ ನೀನಿಲ್ಲಿಂದ ಹೋಗಿಬಿಡಬೇಕು. ನೀನೂ ಮಗುವೂ ಕ್ಷೇಮವಾಗಿದ್ದರೆ, ಅದೇ ನನಗೊಂದು ವಿಧದಲ್ಲಿ ವಿಜಯ. ನಿಜ ಹೇಳಬೇಕಾದರೆ ಶತ್ರುಗಳ ದಾಳಿಯಿಂದ ಹೊರಬೀಳುವೆನೆಂಬ ನಂಬುಗೆ ನನಗಿಲ್ಲ. ಇನ್ನೇನೂ ಕೇಳದೆ ಗಟ್ಟಿ ಮನಸ್ಸಿನಿಂದ ಹೊರಡು" ಎಂದನು ರಾಜ ಗದ್ಗದ ಸ್ವರದಲ್ಲಿ.

"ಸಾಧ್ಯವಿಲ್ಲ ಸ್ವಾಮಿ. ನಿಮ್ಮನ್ನು ಮೃತ್ಯುವಿನ ಪಾಲಿಗೆ ಬಿಟ್ಟು ನಾನು ಮಾತ್ರ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ" ಎಂದು ರಾಣಿ ವಿಲಪಿಸತೊಡಗಿದಳು.



Scanned by CamScanner

ರಾಜನು ಅವಳ ಯಾವ ಮಾತನ್ನೂ ಲಕ್ಷ್ಯ ಮಾಡಲಿಲ್ಲ. ಅವನು ರಹಸ್ಯ ಮಾರ್ಗವನ್ನು ತೆರೆಯುವ ಕೆಲಸದಲ್ಲಿ ಮಗ್ನನಾದನು. ಯಾರೂ ಅನುಮಾನಿಸಲು ಸಾಧ್ಯವಾಗದಂತೆ ಶಯನ ಮಂದಿರದ ದ್ವಾರದ ಪಕ್ಕದಲ್ಲೇ ಸುರಂಗ ಮಾರ್ಗದ ದ್ವಾರವೂ ಇದ್ದಿತು.

ರಹಸ್ಯ ದ್ವಾರವನ್ನು ತೆರೆದ ಮೇಲೆ ರಾಜನು ಕತ್ತಲೆಯ ಆ ಬಿಲ ಮಾರ್ಗವನ್ನು ಬಗ್ಗಿ ನೋಡುತ್ತ, ರಾಣಿಯೊಂದಿಗೆ, "ಹೂಂ. ಒಂದು ಕೈಯಲ್ಲಿ ಮಗುವನ್ನೂ, ಮತ್ತೊಂದು ಕೈಯಲ್ಲಿ ದೀವಿಟಿ ದೊಂದಿಯನ್ನೂ ಹಿಡಿದುಕೊಂಡು ಇದರೊಳಗೆ ಪ್ರವೇಶಿಸು. ಸುರಂಗ ಮಾರ್ಗದಲ್ಲಿ ಪ್ರತಿ ಐನೂರು ಗಜ ದೂರದಲ್ಲಿಯೂ ಒಂದೊಂದು ಮಣಿಯಂತೆ, ಹನ್ನೆರಡು ಮಣಿಗಳನ್ನು ಹುದುಗಿಸಿರುವುದು ನಿನಗೆ ಗೊತ್ತಿದೆ. ಕತ್ತಲೆಯಲ್ಲಿ ಆ ಮಣಿಗಳು ಹೊಳೆಯುತ್ತಾ ಇರುತ್ತವೆ. ದೀವಿಟಿದೊಂದಿಯ ಬೆಳಕು ಬಿದ್ದಾಗ ಅವು ಇನ್ನಿಷ್ಟು ಹೊಳೆಯುತ್ತವೆ. ಕೊನೆಯ ಮಣಿಯ ಹತ್ತಿರ ಹೋದ ಮೇಲೆ, ಅದರ ಹತ್ತಿರವಿದ್ದ ಕಲ್ಲಾಣಿಯನ್ನು ಎರಡು ಮೂರುಸಾರಿ ಕದಲಿಸಿದರೆ ಆ ಕಡೆಯ ಬಾಗಿಲು ತೆರೆದುಕೊಳ್ಳುತ್ತದೆ" ಎಂದನು.

ರಾಜಭವನದ ಹೊರಗೆ ಕೇಳಿಬರುವ ನಗುಗಳೂ, ಕೋಲಾಹಲ ಧ್ವನಿಗಳೂ ಫಕ್ಕನೆ ನಿಂತು ಹೋಗಿ, ನಿಃಶಬ್ದವು ಆವರಿಸಿತು.

"ವೀರಸಿಂಹನು ಬರುವ ಹಾಗಿದೆ. ದೇವೀ, ಹೋಗಿ ಬಾ. ಈ ಜನ್ಮದಲ್ಲಿ ಇಲ್ಲದಿದ್ದರೂ ಬರುವ ಜನ್ಮದಲ್ಲಾದರೂ ಕಲೆತುಕೊಳ್ಳೋಣ." ಎನ್ನುತ್ತ ರಾಜನು ನಿದ್ದೆಯಲ್ಲಿರುವ ಮಗುವನ್ನು ರಾಣಿಯ ಕೈಗೆ ಕೊಟ್ಟನು. ಆಮೇಲೆ ದೀವಿಟಿ, ದೊಂದಿಯನ್ನು ಬೆಳಗಿಸಿ, ಅವಳು ರಹಸ್ಯ ಮಾರ್ಗದಲ್ಲಿ ಇಳಿಯಲು ಸಹಾಯ ಮಾಡಿದನು.

ಕಣ್ಣೀರಿಳಿಯುವ ದೀನ ದೃಷ್ಟಿಯಿಂದ ನೋಡುವ ರಾಣಿಯೊಂದಿಗೆ "ಹೀಗೆ ನಿನ್ನನ್ನು ಕಳುಹಿಸಲು ನನಗೂ ಸಂಕಟವಾಗಿದೆ. ನಮ್ಮ ಮಗನನ್ನು ಕಾಪಾಡಲು ಹೀಗೆ ಮಾಡದೆ ಉಪಾಯವಿಲ್ಲ ದೇವೀ" ಎಂದನು ರಾಜ.

ರಾಜನು ರಹಸ್ಯ ಮಾರ್ಗವನ್ನು ಮುಚ್ಚಿದ ಮರುಕ್ಷಣದಲ್ಲೇ ಹೊರಗಿನಿಂದ ದಿಕ್ಕುಗಳು ಗಡಚಿಕ್ಕುವಂತಹ ಭಯಂಕರ ಶಬ್ದ ಕೇಳಿಸಿತು. ಆಕಾಶ ಬಾಣ ಸಿಡಿದ ಶಬ್ದವದು. ಆಗಲೇ ರಾಜನು ನಡುಗುವ ಕೈಗಳಿಂದ ಸುರಂಗ ದ್ವಾರವನ್ನು ಮುಚ್ಚಿದನು.

ಯಾರೋ ಬಾಗಿಲನ್ನು ಬಡಬಡನೆ ಬಡಿಯುತ್ತಿದ್ದಾರೆ. ರಾಜನು ಕೂಡಲೇ ಖಡ್ಗ ಹಿಡಿದು "ಯಾರದು ? " ಎಂದನು ಗಂಭೀರ ಗರ್ಜನೆಯ ಸ್ವರದಲ್ಲಿ.

—(ಇನ್ನೂ ಇದೆ)



Scanned by CamScanner




## ೨

[ಸುಮೇಧ ರಾಜ್ಯದ ರಾಜನಾದ ಶಾಂತಿದೇವ ರಾಜನು ಶಾಂತಿಪ್ರಿಯನಾಗಿದ್ದನು. ರಾಜಬಂಧುವೇ ಆದ ಸೇನಾಪತಿ ವೀರಸಿಂಹನು, ರಾಜಕುಟುಂಬವನ್ನು ಹತಮಾಡಬೇಕೆಂದು, ಎಲ್ಲರೂ ಉತ್ಸವದ ವಿನೋದಗಳಲ್ಲಿ ನಿಮಗ್ನರಾಗಿದ್ದಾಗಲೇ ತಂತ್ರ ಮಾಡಿದನು. ಇದನ್ನು ತಿಳಿದು ರಾಜನು ಎರಡು ವರ್ಷ ವಯಸ್ಸಿನ ಮಗನನ್ನೂ, ರಾಣಿಯನ್ನೂ ಸುರಂಗದಲ್ಲಿ ಕಳುಹಿಸಿ, ತಾನು ಬರುವುದನ್ನಿದಿರಿಸಲು ತಯಾರಾದನು. —ಮುಂದೆ ಓದಿರಿ]

"ಬಾಗಿಲು ತೆರೆ!" ಎಂದು ಕಠಿಣ ಸ್ವರಗಳಿಂದ ಒಂದರಮೇಲೊಂದರಂತೆ ಜೋರುಜೋರಾಗಿ ಕೇಳ ತೊಡಗಿತು.

ಶಾಂತಿದೇವ ರಾಜನು ಸ್ವಲ್ಪಹೊತ್ತು ಸುಮ್ಮ ನಿದ್ದನು. ನರನರಗಳಲ್ಲಿಯೂ ವೀರಾವೇಶವು ಹರಿದು ಬರುತ್ತಿರಲು, "ನರಸತ್ತ ರಾಜಾ! ತೆರೆ ಬಾಗಿಲು!" ಎಂಬ ಗರ್ಜನೆಗಳು ಬರತೊಡಗಿದುವು. ರಾಜನು ಕಿಟಿಕಿಯಲ್ಲಿರುವ ರಹಸ್ಯ ದ್ವಾರದಿಂದ ಹೊರಗೆ ನೋಡಿದನು. ಸರಿಯಾಗಿ ಕಾಣದಿದ್ದರೂ ಹೊರಗೆ ಮುಖ ಪರಿಚಯವಿಲ್ಲದ ಹತ್ತು ಹನ್ನೆರಡು ಮಂದಿ ಮೊರಟು ಭಟರು ಧಡಧಡನೆ ಬಾಗಿಲು ಬಡಿಯುತ್ತ ಕೂಗುತ್ತಿದ್ದರು. ಬಹುಶಃ ವೀರಸಿಂಹನು ಈ ಹೊಸಬ ರನ್ನು ನೆರೆಯ ರಾಜ್ಯದಿಂದ ಬರಮಾಡಿಸಿಕೊಂಡಿರ ಬೇಕೆಂದುಕೊಂಡನು ಶಾಂತಿದೇವ. ಅವರು ಭೀಕರ ಹುಲಿಗಳಂತೆ ಕಾಲುಗಳನ್ನು ಅಪ್ಪಳಿಸಿಕೊಂಡು ಬಾಗಿಲು ಬಡಿಯುತ್ತಿದ್ದರು.

ಎಷ್ಟು ಕೂಗಿ ಕುಣಿದು ಬಡಿದಾಡಿದರೂ ಬಾಗಿಲು ತೆರೆಯದಿರುವುದರಿಂದ ಅವರಿಗೆ ಸೈರಣೆ ತಪ್ಪಿತು. ಬಾಗಿಲನ್ನು ಒಡೆಯಲಿಕ್ಕಾಗಿ ದೊಡ್ಡ ದೊಡ್ಡ ದಿಮ್ಮಿ ಗಳನ್ನೂ, ತೊಲೆಗಳನ್ನೂ ತರತೊಡಗಿದರು. ಅವು



Scanned by CamScanner



ಗಳ ಪೆಟ್ಟಿಗೆ ಬಾಗಿಲು ಬಹಳ ಹೊತ್ತು ತಾಳದೆಂದು ರಾಜನಿಗೆ ಮನದಟ್ಟಾಗಿ ಬದಿಗೆ ಸರಿದು ನಿಂತನು.

ಭಟರು ದೊಡ್ಡ ದೊಡ್ಡ ದಿಮ್ಮಿಗಳನ್ನು ಹೆಗಲ ಮೇಲೆ ಹೊತ್ತುಕೊಂಡು, ಅವುಗಳಿಂದ ಬಾಗಿಲನ್ನು ಗುದ್ದಿಸಲು ಪತ್ತು ಅಡಿ ಹಿಂದೆ ಹೋಗಿ ವೇಗವಾಗಿ ಮುಂದಕ್ಕೆ ಧಾವಿಸಿ ಬರುವ ಸಮಯ ನೋಡಿ, ಶಾಂತಿದೇವ ರಾಜನು ಫಕ್ಕನೆ ಬಾಗಿಲನ್ನು ತೆರೆದನು. ಆಗ ಹೆದ್ದಿಮ್ಮಿಯೊಂದಿಗೆ ಭಟರೂ ಬಿದ್ದು ತಲೆ ಯೊಡೆದುಕೊಂಡರು. ಮರುಕ್ಷಣದಲ್ಲಿ ರಾಜನು ಕತ್ತಿ ಮಿಂಚಿಸಿಕೊಂಡು ಮಿಂಚಿನ ವೇಗದಲ್ಲಿ ಹಾರಿದನು. ಏನಾಯಿತೆಂದು ಯೋಚನೆ ಮಾಡುವುದ ರೊಳಗೆ ಇಬ್ಬರ ತಲೆಗಳು ಹಾರಿಹೋದುವು.

"ತಪ್ಪಿಸಿ ಓಡುತ್ತಿದ್ದಾನೆ! ಓಡುತ್ತಿದ್ದಾನ್ರೋ! ಹಿಡೀರೋ!" ಎಂದು ಉಳಿದ ರಣಭಟರು ಗಡಿಬಿಡಿಯಿಂದ ಅಚೀಚೆ ಓಡುತ್ತಾ ಕೂಗಿದರು. ಆಗ ದೂರದಿಂದ ಎಲ್ಲರ ಶಬ್ದವನ್ನೂ ಮೀರಿಸುವ ಅಧಿಕಾರದ ಕರ್ಕಶ ಕಂಠಸ್ವರವು "ಬಿಡಬೇಡ್ರೋ! ಹೇಗಾದರೂ ಕೊಂದುಬಿಡ್ರೋ! ಅವನು ತಪ್ಪಿಸಿ ಕೊಂಡು ಹೋದರೆ ನಿಮ್ಮೆಲ್ಲರ ತಲೆಗಳೂ ಉರುಳುತ್ವೇ! ಜಾಗ್ರತೇ!" ಎಂದು ಆಜ್ಞೆ ಮಾಡಿತು.

ಅದು ವೀರಸಿಂಹನ ಕಂಠಸ್ವರವೆಂದು ರಾಜನಿಗೆ ಗೊತ್ತಾಯಿತು.

ಇದು ರಾಜಪ್ರಾಸಾದದೊಳಗಿನ ಘೋರ ಕೊಲೆ ಗಳಿಕೆಯಾದರೆ, ಹೊರಗಡೆಯಲ್ಲಿ ಉತ್ಸವಾಂಗದ ವಿನೋದದ ಶಬ್ದಗಳು ಕೇಳಿಕೊಂಡೇ ಇದ್ದುವು. ಆಕಾಶದ ಮೇಲೆ ಹಾರುವ ಬಾಣದುರುಸುಗಳು, ಕೃತ್ರಿಮ ವೃಕ್ಷಾಕಾರಗಳಲ್ಲಿ ಬಗೆಬಗೆಯ ಬಣ್ಣ ಬಣ್ಣ ಗಳ ಚಿತ್ರವಿಚಿತ್ರ ಬೆಡಿಬಾಣಗಳು ಕಿವಿಗಳನ್ನು ಕೊರೆಯುವ ಸಿಡಿಸದ್ದುಗಳಿಂದ ದಿಕ್ಕುಗಳು ಗಡಚಿಕ್ಕಿ ಕೊಂಡಿದ್ದುವು. ರಾಜಭವನದೊಳಗೆ ನಡೆಯುತ್ತಿದ್ದ ಹೋರಾಟವು ಅಲ್ಲಿರುವವರಿಗೆ ಸ್ವಲ್ಪವೂ ತಿಳಿಯದು!

ಮಹಾರಾಣಿಯ ಭವನದ ತುಂಬಾ ಅನೇಕ ಕೋಣೆಗಳೂ, ಮಂಟಪಗಳೂ ಇದ್ದುವು. ಅವುಗಳ ಬಾಗಿಲುಗಳೆಲ್ಲವೂ ಮುಚ್ಚಿಕೊಂಡಿದ್ದುವು. ಅಂತಹ ಯಾವ ಬಾಗಿಲಿನೊಳಗಿನಿಂದಾದರೂ ರಾಜನೂ, ರಾಣಿಯೂ ಹೊರಗೆ ಬಂದುಬಿಟ್ಟರೆ ಅವರನ್ನು ಕೂಡಲೇ ಕಡಿದು ಕೊಂದುಬಿಡಬೇಕೆಂಬ ಆಜ್ಞೆ ಯನ್ನು ಧರಿಸಿಕೊಂಡ ಧಾಂಡಿಗ ಭಟರು ಬಿಚ್ಚುಗತ್ತಿ ಯೊಂದಿಗೆ ಸಿದ್ಧರಾಗಿದ್ದರು.

ಇದಿರಲ್ಲಿ ಕಾಣುವ ಮೇಲೇರುವ ಮೆಟ್ಟಲುಗಳ ಕಡೆಗೆ ರಾಜನು ವೇಗದಿಂದ ಓಡಿದನು. ಅಲ್ಲಿ ಕಾವಲಾಗಿದ್ದ ರಕ್ಕಸನಂತಹ ಭಟನು ಕತ್ತಿ ಹಿರಿದು ರಾಜನ ಮೇಲೆ ಕೈಯೆರಗಿಸುವಾಗ ರಾಜನು ಬಗ್ಗಿ ಹಾರಿ ಅವನ ಕಾಲನ್ನು ಕುಟ್ಟಿ ಕೆಳಕ್ಕೆ ಬೀಳಿಸಿ, ಚಕ ಚಕನೆ ಮೆಟ್ಟಲೇರಿ ಹೋದನು. ಅಲ್ಲಿಯ ಬಾಗಿಲು ಮುಚ್ಚಿಕೊಂಡಿತ್ತು. ರಾಜನು ಆ ಬಾಗಿಲ ಅಗಳ ತೆಗೆಯುತ್ತಿರಲು ಇಬ್ಬರು ಭಟರು ಅವನ ಕಡೆಗೆ



Scanned by CamScanner

ಓಡಿಬಂದರು. ರಾಜನು ಅವರಿಬ್ಬರನ್ನೂ ಕಾಲುಗಳಿಂದ ಒದ್ದು ಬೀಳಿಸಲು, ಅವರು ಕಿರಿಚುತ್ತಾ ಮೆಟ್ಟಲಲ್ಲಿ ಹೊರಳಿಕೊಂಡು ಕೆಳಗೆ ಬಿದ್ದರು. ರಾಜನು ಬಾಗಿಲು ತೆರೆದು ಮಾಳಿಗೆಯ ಮೇಲ್ಭಾಗದಲ್ಲಿ ಹೋಗಿ ನಿಂತನು.

ರಾಜಪ್ರಾಸಾದದ ಹೊರಗೆ ನಡೆಯುವ ಉತ್ಸವದ ಬೆಡಿ ಬಾಣಬಿರುಸುಗಳನ್ನು ನೋಡುತ್ತ ಕೋಲಾಹಲದ ಆನಂದದಲ್ಲಿ ಮುಳುಗಿದ ಜನರು ಕೇಕೇ ಹಾಕುತ್ತ ಅಡಿಗಡಿಗೂ ಚಪ್ಪಾಳೆ ತಟ್ಟುತ್ತಿದ್ದರು. ಏನೂ ಅರಿಯದ ಸರಳ ಮುಗ್ಧ ಪ್ರಜೆಗಳು ತಮ್ಮ ಯುವರಾಜನ ಜನ್ಮದಿನೋತ್ಸವವನ್ನು ಸಂಭ್ರಮಾನಂದದಲ್ಲಿ ಸವಿಯುತ್ತಿದ್ದರು. ತಮ್ಮ ಯುವರಾಜನೂ, ರಾಜದಂಪತಿಗಳೂ ಮೃತ್ಯುವಿನೊಂದಿಗೆ ಮುಖಾಮುಖೀ ಹೋರಾಡುತ್ತಿರುವ ಸಂಗತಿ ಅವರಿಗೆ ಗೊತ್ತೇ ಇಲ್ಲ ಪಾಪ! ಭಕ್ತಿಗೌರವಗಳಿಂದ ನೋಡುವ ಪ್ರಜೆಗಳಿಗೂ, ರಾಜನಿಗೂ ನಡುವಿನಲ್ಲಿ ಕೆಲವು ಗಜಗಳ ದೂರವಷ್ಟೇ ಇದ್ದಿತು. ಆದರೂ ಅವರನ್ನು ಸೇರುವ ಮಾರ್ಗವು ರಾಜನಿಗೆ ಕಾಣುವುದಿಲ್ಲ! ಎಂತಹ ವಿಧಿಯ ವೈಪರೀತ್ಯವಿದು!

ಯಾರೋ ಮೆಟ್ಟಲೇರಿ ಬರುವ ಸಪ್ಪಳ ರಾಜನ ಕಿವಿಗೆ ಕೇಳತೊಡಗಿತು. ಹಾಗೆ ಬರುವವರನ್ನು ಹತ ಮಾಡಬೇಕೆಂತಲೇ ಬಾಗಿಲಿಗೆ ಚಿಲಕ ಹಾಕದೆ ಬಿಟ್ಟಿದ್ದನು. ಅವರು ಬೆಕ್ಕಿನ ಹೆಜ್ಜೆಯಲ್ಲಿ ಏರಿ ಬರುವಂತಿದ್ದಿತು. ರಾಜನು ಬಾಗಿಲ ಹತ್ತಿರ ನಿಂತು, "ಯಾರಾದರೂ ನನ್ನನ್ನು ಹಿಡಿಯಲು ಬಂದರೆ ಸಾಯುವಿರಿ! ಎಚ್ಚರ! ನಿಮ್ಮ ಒಡೆಯನೇ ಬರಲಿ" ಎಂದನು.

ಆಗಲೇ ಕೆಳಬದಿಯಲ್ಲಿದ್ದವನು, "ಹುಂ, ಅವನನ್ನು ಕೊಂದುಬಿಟ್ಟರೆ ಪೆಟ್ಟಿಗೆ ತುಂಬಾ ಬಂಗಾರದ ಬಹುಮಾನ ಕಾದಿದೆ! ಹಿಂಜರಿಯಬೇಡಿ!" ಎಂದು ಅವರನ್ನು ಉತ್ಸಾಹಪಡಿಸುತ್ತಿದ್ದನು.



ಹೇರಾಸೆ ಎಂಬುದು ಮನುಷ್ಯರಿಂದ ಎಂತಹ ದುಷ್ಕಾರ್ಯವನ್ನಾದರೂ ಮಾಡಿಸಿಬಿಡುತ್ತದೆ. ಮನುಷ್ಯರು ಮೂರ್ಖ ಕತ್ತೆಗಳೇ ಆಗುತ್ತಾರೆ!

"ಹೌದೌದು! ಪೆಟ್ಟಿಗೆ ತುಂಬಾ ಬಂಗಾರ! ಕೊಲ್ಲುವವರಿಗೆ!" ಎಂದು ಮುಣಮುಣಿಸಿಕೊಂಡೇ ಅವರು ನಾ ಮುಂದೆ ತಾ ಮುಂದೆ ಎಂಬಂತೆ ಬೇಗ ಬೇಗ ಮೆಟ್ಟಲೇರಿದರು.

"ತಗೊಳ್ಳಿ ಪೆಟ್ಟಿಗೆ ತುಂಬಾ ಬಂಗಾರ!" ಎಂದು ರಾಜನು ಅವರ ಮೇಲೆ ಕತ್ತಿ ಬೀಸಿದನು.

ಆ ಘಾತಕರಿಬ್ಬರ ಕೈಗಳೊಂದಿಗೆ ಕತ್ತಿಗಳೂ ಬಿದ್ದುಹೋದುವು. ಅವರಿಬ್ಬರೂ ಸಾವಿನ ಕೂಗಿನೊಂದಿಗೆ ಮೆಟ್ಟಲಿನಲ್ಲಿ ಉರುಳಿಹೋದರು.

ಈಗ ಶಾಂತಿದೇವ ರಾಜನು ಸುರಕ್ಷಿತ ಸ್ಥಳದಲ್ಲೇ ಇರುವನು. ಮೆಟ್ಟಲಿನ ಮೇಲೇರಿ ಎಷ್ಟು ಮಂದಿ ಬಂದರೂ ಅವರನ್ನು ಅವಲೀಲೆಯಾಗಿ ತನ್ನ ಕತ್ತಿಗೆ ಬಲಿಕೊಡುವ ಅನುಕೂಲತೆಯಲ್ಲಿದ್ದನು.



Scanned by CamScanner

ಈ ಅಪಾಯವನ್ನು ಅರಿತುದರಿಂದ ವೀರಸಿಂಹನ ಬಳಗದವರು ಕೆಲವರು ಮತ್ತೊಂದು ಕಡೆಯಿಂದ ಉದ್ದವಾದ ಏಣಿಯನ್ನಿಟ್ಟು ಅದರ ಮೇಲೆ ಹತ್ತಿ ಮಾಳಿಗೆಗೆ ಬರಲು ನೋಡುತ್ತಿದ್ದರು.

ಅದನ್ನು ಊಹಿಸಿಕೊಂಡ ರಾಜನು, ಒಂದು ಕಡೆ ಮೆಟ್ಟಿಲೇರಿ ಬರುವವರೊಡನೆ ಹೋರಾಡುತ್ತ, ಮತ್ತೊಂದು ಕಡೆಗೂ ಆಗಾಗ ಕಣ್ತೆಗೆದು ನೋಡುತ್ತಲೇ ಇದ್ದನು.

ಹಠಾತ್ತಾಗಿ ಭಟನೊಬ್ಬನು ಮಾಳಿಗೆಯ ಮೇಲೆ ತನ್ನ ಕಡೆಗೆ ಈಟಿಯನ್ನು ಗುರಿ ಹಿಡಿಯುವುದು ಕಂಡಿತು. ರಾಜನು ಥಕ್ಕನೆ ಕೆಳಗೆ ಬಾಗಿಕೊಂಡೇ ಹಾರಿ ಆ ಭಟನನ್ನು ಗೂಳಿಯ ಹಾಗೆ ಹಾಯ್ದು ದೂಡಿದನು. ಈಟಿಯವನು ಕೆಟ್ಟ ದನಿಯಲ್ಲಿ ಕೂಗುತ್ತಾ ಮಾಳಿಗೆಯಿಂದ ನೆಲಕ್ಕೆ ಅಪ್ಪಳಿಸಿ ಬಿದ್ದನು. ರಾಜನು ಬಾಗಿ ನೋಡಿದನು.

ಇನ್ನೂ ಕೆಲವರು ಏಣಿಯನ್ನು ಹಿಡಿದು ಮೇಲೆ ಹತ್ತುತ್ತಿದ್ದಾರೆ! ಕೂಡಲೇ ರಾಜನು ಒಮ್ಮೆಗೇ ಹಾರಿ ಏಣಿಯನ್ನು ಕಾಲಿನಿಂದ ಒದ್ದು ತಳ್ಳಿಬಿಟ್ಟನು. ಮರುಕ್ಷಣದಲ್ಲಿ ಹಾಹಾಕಾರಗಳ ಕೆಟ್ಟ ಕೂಗುಗಳು!

ಅಷ್ಟರಲ್ಲೇ ಸಿಕ್ಕಿದ ಈ ವ್ಯವಧಿಯೊಳಗೆ ಮತ್ತೆ ಕೆಲವು ಕೊಲೆಗಡುಕ ಭಟರು ಮೆಟ್ಟಲಿನಲ್ಲೇರಿ ಮೇಲೆ ಬಂದುಬಿಟ್ಟರು. ಬರುತ್ತಲೇ ಇದ್ದಾರೆ!

ಈ ಸ್ಥಿತಿಯಲ್ಲಿ ಅವರೊಂದಿಗೆ ಹೋರಾಡುವುದು ಅಷ್ಟೇನೂ ಪ್ರಯೋಜನಕಾರಿಯಲ್ಲವೆಂದು, ಮತ್ತಿಷ್ಟು ಅಪಾಯಕಾರಿಯಾದೀತೆಂದು ಶಾಂತಿದೇವನಿಗೆ ಗೊತ್ತಾಯಿತು. ವೀರಸಿಂಹನು ಕಡೇಪಕ್ಷ ನೂರು ಮಂದಿ ಭಟರನ್ನಾದರೂ ತನ್ನ ಹಿಂದೆ ಇಟ್ಟುಕೊಂಡಿರಬಹುದು. ಅವರೆಲ್ಲರೂ ತನ್ನನ್ನು ಮುತ್ತಿಬಿಡಬಹುದು. ಒಬ್ಬನೇ ಎಷ್ಟು ಮಂದಿಯನ್ನು ಕೊಲ್ಲಲಾದೀತು? ಮರಣದ ಹೊರತು ಬೇರೊಂದು ಮಾರ್ಗವು ರಾಜನಿಗೆ ಕಾಣಲಿಲ್ಲ.

ಮರಣದ ಭಯವನ್ನು ಆಗಲೇ ತೊರೆದಿದ್ದನು ರಾಜ. ತನ್ನ ಮಗನನ್ನು ರಾಣಿಯೊಂದಿಗೆ ಸುರಂಗದ ಮೂಲಕ, ಕಳುಹಿಸಿಬಿಟ್ಟದ್ದು ರಾಜನಿಗೊಂದು ತೃಪ್ತಿ



Scanned by CamScanner

ಯನ್ನುಂಟುಮಾಡಿತ್ತು. ತನ್ನ ಅಂತಿಮ ವಚನವನ್ನೂ ಅವಳೊಂದಿಗೆ ಹೇಳಿ ಮುಗಿದಿತ್ತು. ಅಂತಲೇ ಮರಣದ ಭಯವಿಲ್ಲ ರಾಜನಿಗೆ. ಸಾಯುವವರೆಗೂ ಹೋರಾಡದೆ ಸಾಯಲಾರನು ಕ್ಷತ್ರಿಯ ವೀರ!

ಶತ್ರು ಸೈನಿಕರು ರಾಜನನ್ನು ಸಮೀಪಿಸಿದರು. ರಾಜನ ತಲೆಗೆ ನೇರಾಗಿ ಮೇಲೆ ಒಂದು ಬೆಡಿ ಬಾಣವು ಸಿಡಿದು ಪ್ರಕಾಶಮಾನವಾಗಿ ಚೆದರಿತು, ಆ ಪ್ರಕಾಶದಲ್ಲಿ ಭಟರ ಹಿಂದೆ ನಿಂತಿದ್ದ ವೀರಸಿಂಹನ ಮುಖವು ಕಂಡಿತು ರಾಜನಿಗೆ!

"ಘಾತಕಾ! ದ್ರೋಹಿಯೇ! ನರರಾಕ್ಷಸಾ! ತೆಗೆದುಕೋ!" ಎಂದು ರಾಜನು ತನ್ನ ಸುರಿಗತ್ತಿಯನ್ನು ತೆಗೆದು ವೀರಸಿಂಹನ ಕಡೆಗೆ ಬಿಸುಟನು. ಅವನು ಫಕ್ಕನೆ ತಲೆ ತಪ್ಪಿಸಿಕೊಂಡುದರಿಂದ, ಸಾವು ತಪ್ಪಿ, ಎಡದ ಕಿವಿ ಸ್ವಲ್ಪ ತುಂಡಾಗಿ ಹೋಯಿತು.

"ಕೊಲ್ಲಿರೋ ಅವನನ್ನು!" ಎಂದು ವೀರಸಿಂಹನು ಹಿಡಿಸಲಾಗದ ಕೋಪದಿಂದ ಕರ್ಕಶವಾಗಿ ಕೂಗಿದನು. ಭಟರು ಅತ್ಯುತ್ಸಾಹದಿಂದ ರಾಜನ ಮೇಲೆ ಹಾಯ್ದರು. ಅಷ್ಟರೊಳಗೆ ರಾಜನು, ಮಾಳಿಗೆಯ ಬದಿಗೆ ಹಾರೋಡಿ, ವೀರಸಿಂಹನ ಭಟರು ಮತ್ತೆ ಏರಿಸಿಟ್ಟ ಏಣಿಯಿಂದ ಸರಸರನೆ ಇಳಿಯತೊಡಗಿದನು.

"ಆ ಏಣೀ ಕೆಳಗೆ ದೂಡಿರೋ! ದೂಡಿರೋ!" ಎಂದು ವೀರಸಿಂಹನು ಕೆಟ್ಟಸ್ವರದಲ್ಲಿ ಕಿರಿಚಿ ಕೂಗಿದನು. ಅಷ್ಟರಲ್ಲಿ ರಾಜನು ಅರ್ಧದವರೆಗೆ ಕೆಳಗಿಳಿದು, ಏಣಿ ಮಾಲುವುದನ್ನರಿತು ಒಮ್ಮೆಗೇ ಕೆಳಕ್ಕೆ ಹಾರಿ, ಏಣಿಯನ್ನು ಆಚೆಯ ಬದಿಯ ಎತ್ತರವಾದ ಪ್ರಹರೀ ಗೋಡೆಗೆ ತಳ್ಳಿಬಿಟ್ಟನು.

"ಏಣಿಯನ್ನು ಕೆಳಕ್ಕಿಳಿಯಿರೋ! ಕೆಳಕ್ಕಿಳಿಯಿರೋ!" ಎಂದು ವೀರಸಿಂಹನು ಮತ್ತೆ ಕಿರಿಚತೊಡಗಿದನು. ಆದರೆ ಆಗ ಅವನ ಕಡೆಯ ಭಟರೆಲ್ಲಾ ಮಾಳಿಗೆಯ ಮೇಲೆ ಹೋಗಿಬಿಟ್ಟಿದ್ದರು. ಅಲ್ಲಿಯೇ ರಾಜನ ಕೊಲೆ ನಡೆಸುವ ಉತ್ಸಾಹದಲ್ಲಿ.

ರಾಜನನ್ನು ಹೇಗಾದರೂ ಹಿಡಿದು ಪೆಟ್ಟಿಗೆ ತುಂಬಾ ಬಂಗಾರವನ್ನೂ, ವೀರಸಿಂಹನ ಅಭಿಮಾನ





Scanned by CamScanner



ವನ್ನೂ ಹೊಂದಬೇಕೆಂಬ ಉತ್ಸಾಹದ ಮುಂದೇಳಿಕೆಯಲ್ಲಿ ವೀರಸಿಂಹನ ತಂತ್ರಕ್ಕೊಳಗಾದ ಎಲ್ಲ ಭಟರೂ ಮಾಳಿಗೆಯ ಮೇಲೆ ಸೇರಿಬಿಟ್ಟಿದ್ದರು. ಕೆಳಗಿದ್ದ ಇಬ್ಬರು ಭಟರು ಏಣಿಯ ಮೇಲಿನಿಂದ ಕೆಳಗೆ ಬಿದ್ದು ತೀವ್ರವಾಗಿ ಗಾಯಗೊಂಡಿದ್ದರು. ಅವರು ಕುಂಟುತ್ತಾ ಹೋಗಿ ಏಣಿಯನ್ನು ಎಳೆಯುವುದರೊಳಗೆ ರಾಜನು ಗೋಡೆಯ ಮೇಲೆ ಹತ್ತಿಯಾಗಿತ್ತು. ಆದರೂ ಅವರು ಏಣಿಯನ್ನು ಎಳೆದು ಹಾಕಲು ಶ್ರಮಪಡುತ್ತಲೇ ಇದ್ದರು.

"ಲೋ ಮೂರ್ಖರೇ! ಇನ್ನೂ ಏಕೆ ಏಣಿಯನ್ನು ಎಳೆಯುತ್ತೀರಿ? ಮೇಲೆ ಹೋದವನನ್ನು ಹತ್ತಿ, ಕೊಲ್ಲಿರೋ!" ಎಂದು ಮತ್ತೆ ಕೂಗಿದನು ವೀರಸಿಂಹ.

ಎತ್ತರವಾದ ಆ ಪ್ರಹರೀ ಗೋಡೆಯ ಆಚೆಯ ಬದಿಯಲ್ಲಿಯೇ, ಗೋಡೆಗೆ ನೀರಿನ ತೆರೆಗಳನ್ನು ಹೊಡೆಯುತ್ತಾ ಸುಮತೀ ನದಿ ಪ್ರವಹಿಸಿಕೊಂಡಿತ್ತು.

ರಾಜನು ಗೋಡೆಯ ಮೇಲೆ ನಿಂತುಕೊಂಡು, ಏನು ಮಾಡುವುದೆಂದು ಆಲೋಚಿಸತೊಡಗಿದನು.

ಕಿವಿ ತುಂಡಾಗಿ ನೆತ್ತರಿಳಿಯುತ್ತಿದ್ದರೂ ಸಹಿಸಿಕೊಂಡು, ವೀರಸಿಂಹನು ಬೇಗಬೇಗನೆ ಮುಚ್ಚಿಗೆಯಿಂದ ಕೆಳಕ್ಕಿಳಿದನು. ರಾಜನು ಜೀವದೊಂದಿಗೆ ತಪ್ಪಿಸಿಕೊಂಡರೆ ಅವನ ಜೀವ ಉಳಿಯುವಂತಿಲ್ಲವೆಂದು ಅವನಿಗೆ ಅರಿವಾಗಿತ್ತು. ತನ್ನೊಂದಿಗೆ ಇಳಿದು ಬಂದಿದ್ದ ಕೊಲೆಗಡುಕರನ್ನು ನೋಡಿ ಅವನು, "ಹೂಂ, ಹೂಂ, ಹತ್ತಿರೋ! ಅವನನ್ನು ಹೇಗಾದರೂ ಹತಮಾಡಿ ಬಹುಮಾನ ಪಡೆಯಿರಿ! ಬಿಡಬೇಡಿ!" ಎಂದು ಹುರುಡಿಸುತ್ತ, ತಾನು ಒಂದು ಈಟಿಯನ್ನು ರಾಜನ ಕಡೆಗೆ ಎತ್ತಿ ಗುರಿ ಹಿಡಿದನು. ಗುರಿ ನೋಡಿ ಹೊಡೆಯುವುದರಲ್ಲಿ ವೀರಸಿಂಹನು ಬಹಳ ಗಟ್ಟಿಗ! ಅವನ ನೈಪುಣ್ಯತೆಯನ್ನು ಮೆಚ್ಚಿ ರಾಜನು ಪ್ರತ್ಯೇಕವಾಗಿ ಸತ್ಕರಿಸಿದ್ದಾನೆ!

ವೀರಸಿಂಹನು ರಿವ್ವನೆ ಪ್ರಯೋಗಿಸಿದ ಈಟಿ ರಾಜನನ್ನು ತಾಗಿತೋ ಇಲ್ಲವೋ ಯಾರಿಗೂ ತಿಳಿಯಲಿಲ್ಲ. ಬೆಳುದಿಂಗಳ ಆಕಾಶದಲ್ಲಿ ಹಾರಿದ ಈಟಿ ಹೊಳೆದುದನ್ನು ಎಲ್ಲರೂ ನೋಡಿದ್ದಾರೆ. ಆದರೆ ಅದು ರಾಜನಿಗೆ ತಗಲಿತೋ ಇಲ್ಲವೋ? ರಾಜನ ಆರ್ತನಾದವೇನಾದರೂ ಹೊರಟಿತೋ ಇಲ್ಲವೋ? ಅದಕ್ಕೆ ಉತ್ತರ ಯಾರಿಗೂ ದೊರೆಯಲಿಲ್ಲ. ಆಶ್ಚರ್ಯವೆಂದರೆ ಆ ಕ್ಷಣದಲ್ಲಿ ರಾಜನು ಗೋಡೆಯ ಮೇಲೆ ಕಾಣಲೇ ಇಲ್ಲ!

ವೀರಸಿಂಹನು ವೇಗವಾಗಿ ಏಣಿಯ ಮೇಲೇರಿ ಗೋಡೆಯ ಮೇಲಿನಿಂದ ಆ ಕಡೆಗೆ ಬಗ್ಗಿ ಬಗ್ಗಿ ನೋಡಿದನು. ರಾಜನು ತನ್ನ ಈಟಿಯ ಏಟಿಗೆ ನದಿಯೊಳಗೇ ಬಿದ್ದಿರಬೇಕು ಎಂದುಕೊಂಡು ಗೋಡೆಯಲ್ಲಿ ರಕ್ತದ ಕಲೆಯೇನಾದರೂ ಕಾಣುವುದೋ, ನದಿಯ ನೀರಿನಲ್ಲಿ ಕೆಂಬಣ್ಣ ಕಲೆತಿರುವುದೋ ಎಂದು ಕೊಳ್ಳುತ್ತಾ, ಕಣ್ಣಿನ ಮೇಲೆ ಕಣ್ಣಿಟ್ಟು ನೋಡಿದನು.

ಹಾಗೇನೂ ಕಾಣಲಿಲ್ಲ. ಈಟಿ ತಗಲುವುದರೊಳಗೇ ರಾಜನು ಬೇಕೆಂತಲೇ ನದಿಗೆ ಹಾರಿರಬೇಕೆಂದು ಅನುಮಾನವೆದ್ದಿತು ಅವನಿಗೆ. ಈ ಅನುಮಾನವನ್ನು ಹೋಗಲಾಡಿಸುವುದು ಹೇಗೆ? ಅವನ ಎದೆ ಒಮ್ಮೆಗೇ ಡವಡವಿಸತೊಡಗಿತು.

"ನಾನು ಈಟಿ ಎಸೆದದ್ದು ನೀವಾರಾದರೂ ನೋಡಿದಿರಾ?" ಎಂದು ವೀರಸಿಂಹನು ಭಟರನ್ನು ನೋಡಿ ಕೇಳಿದನು.

"ನೋಡಿದೆವು ನೋಡಿದೆವು!" ಎಂದರು ಅನೇಕ ಭಟರು.

"ಆ ಈಟಿ ಅವನಿಗೆ ತಗಲಿದ್ದನ್ನು ನೋಡಿದಿರಾ?" ಎಂದು ಕೇಳಿದನು ವೀರಸಿಂಹ.

"ತಗಲಿತು! ತಗಲಿತು!" ಎಂದರು ಅನೇಕರು.

"ನಾನು ಬಿಸುಟ ಈಟಿ ರಾಜನಿಗೆ ತಗಲಿದ್ದನ್ನು ಸ್ಪಷ್ಟವಾಗಿ ನೋಡಿದ್ದೀರಾ?" ಎಂದು ಪುನಃ ವೀರಸಿಂಹನು ಕೇಳಿದನು.

ಒಂದು ಪೆಟ್ಟಿಗೆ ತುಂಬಾ ಬಂಗಾರ ಪ್ರಾಪ್ತಿ ಜಾರಿಹೋಯಿತೆಂಬ ಬೇಸರದಲ್ಲಿ ಭಟರ ಮುಖ ಸಪ್ಪಗಾಗಿತ್ತು. ಅವರಿಗೆ ಒಮ್ಮೆಗೇ ನಿರುತ್ಸಾಹ ಕವಿದಿತ್ತು.

ಆದರೂ ವೀರಸಿಂಹನ ಅಭಿಮಾನ ಉಳಿಸಿಕೊಳ್ಳಬೇಕೆಂದುಕೊಂಡು ಒಬ್ಬ ಭಟನು "ತಮ್ಮಂಥಾ ಸೇನಾಧಿಪತೀ ಪ್ರಭುಗಳು ಬೀಸಿದ ಈಟಿಯು ಗುರಿ ಹೇಗೆ ತಪ್ಪೀತು? ಅದು ಸರಿಯಾದ ಮರ್ಮಕ್ಕೇ ತಾಗಿದೆ!" ಎಂದನು.

"ಯಾವ ಮರ್ಮಕ್ಕೆ ನಿನ್ನ ತಲೆ! ಎದೆಗೋ? ಕುತ್ತಿಗೆಗೋ? ಕಣ್ಣಿಗೋ? ಸರಿಯಾಗಿ ಹೇಳು!" ಎಂದು ಗರ್ಜಿಸಿದನು ವೀರಸಿಂಹ.

"ಎದೆಗೆ!" ಎಂದು ಮೊದಲಿನವನು ಹೇಳುವಾಗಲೇ ಇನ್ನೊಬ್ಬ ಭಟನು "ಕುತ್ತಿಗೆಗೆ!" ಎಂದು ಹೇಳಿದನು.

"ಮುಚ್ಚಿರಿ ಬಾಯಿ ಮುಟ್ಠಾಳರೆ!" ಎಂದು ಗರ್ಜಿಸಿ ಕಾಲಪ್ಪಳಿಸಿ ವೀರಸಿಂಹನು "ನನ್ನ ಈಟಿಯ ಪೆಟ್ಟಿಗೆ ರಾಜನು ನದಿಗೆ ಬಿದ್ದುದನ್ನು ಕಣ್ಣಾರೆ ಕಂಡಿದ್ದರೆ ಹೇಳಿರಿ! ಇಲ್ಲದಿದ್ದರೆ ಬಾಯಿ ಮುಚ್ಚಿ ಬಾಲ ಮುದುಡಿ ಸುಮ್ಮನಿರಿ! ಹುಚ್ಚುಚ್ಚು ಬಾಯಿ ಹರಿದರೆ ಹಲ್ಲೆಲ್ಲಾ ಉದುರೀತು!" ಎಂದನು ರೋಷಾವೇಷದಲ್ಲಿ.

ಯಾರೂ ಮಾತಾಡಲಿಲ್ಲ. ವೀರಸಿಂಹನು ಒಲೆಯೊಳಗೆ ಕೈಹಾಕಿ ಸುಟ್ಟುಕೊಂಡವನ ಹಾಗೆ ಚಡಪಡಿಸುತ್ತ, ವೇಗವಾಗಿ ಪ್ರವಹಿಸುವ ನದಿಯನ್ನೇ ನೋಡುತ್ತಾ ನಿಂತನು. ನದಿ ಅವನನ್ನು ನೋಡಿ ಸಳಸಳನೆ ನಕ್ಕು ನಕ್ಕು ಓಡುವ ಹಾಗೆ ಕಾಣುತ್ತಿತ್ತು.

—(ಇನ್ನೂ ಇದೆ)






೨

[ ಶಾಂತಿಪ್ರಿಯನಾದ ಸುಮೇಧದ ರಾಜ ಶಾಂತಿದೇವನನ್ನೂ, ರಾಣಿಯನ್ನೂ, ಎರಡು ವಯಸ್ಸಿನ ಮಗನನ್ನೂ ಕೊಲ್ಲಲಿಕ್ಕೆ ಸೇನಾಧಿಪತಿ ವೀರಸಿಂಹನು ತನ್ನ ಅನುಚರರೊಂದಿಗೆ ತಂತ್ರ ಮಾಡಿದನು. ಆಯತ ವೇಳೆಯಲ್ಲಿ ಇದನ್ನು ತಿಳಿದು ರಾಜನು ರಾಣಿಯನ್ನು ಮಗನೊಂದಿಗೆ ರಹಸ್ಯ ಸುರಂಗ ಮಾರ್ಗದಲ್ಲಿ ಹೊರಗೆ ಕಳುಹಿಸಿ, ತಾನೊಬ್ಬನೇ ವೀರಸಿಂಹನ ಭಟರೊಂದಿಗೆ ಹೋರಾಡುತ್ತ, ನದಿಗೆ ಧುಮುಕಿದನು. — ತರುವಾಯ ]

ಇಲ್ಲಿ ಅರಮನೆಯ ಅಂತಃಪುರದೊಳಗಿನ ಸುರಂಗದ ಮೆಟ್ಟಿಲಲ್ಲಿ ಕೆಳಗಿಳಿದ ರಾಣಿ ಕಣ್ಣೀರು ತುಂಬಿಕೊಂಡು ಮೇಲಕ್ಕೆ ನೋಡಿದಳು. ಅಷ್ಟರೊಳಗೆ ರಾಜನು ಬಾಗಿಲು ಮುಚ್ಚಿಬಿಟ್ಟಿದ್ದರಿಂದ, ಇನ್ನೀ ಜನ್ಮದಲ್ಲಿ ತನ್ನ ಗಂಡನನ್ನು ನೋಡಲಾರೆನೇನೋ ಎಂಬ ದುಃಖವು ಮಹಾ ಬಾಧೆಯಾಗಿ ಅವಳನ್ನು ನೋಯಿಸಿತು.

ಕೆಲವೇ ನಿಮಿಷಗಳ ಹಿಂದೆ ಆ ರಾಜ ದಂಪತಿಗಳು ಎಷ್ಟೊಂದು ಆನಂದದಲ್ಲಿದ್ದರು! ಅಷ್ಟರೊಳಗೆ ಹೀಗಾಗುತ್ತದೆಂದು ಯಾರುತಾನೇ ಊಹಿಸಿದರು? ಇದೊಂದು ಸ್ವಪ್ನವಾಗಿರಬಾರದೇಕೆ? ಎಚ್ಚರದಲ್ಲೇ ಇರುವಾಗ ಸ್ವಪ್ನವೆಂದು ಹೇಗೆ ಭಾವಿಸಲಾದೀತು? ಮೇಲಿನ ಬಾಗಿಲು ಮುಚ್ಚಿರುವುದನ್ನು ನೋಡಿದಾಗ, ತನಗೆ ಪ್ರಪಂಚದ ಬಾಗಿಲೇ ಮುಚ್ಚಿ ಹೋದಂತೆನಿಸಿತು ಆ ಮಹಾರಾಣಿಗೆ!

ಈವರೆಗೂ ಅವಳು ಒಬ್ಬಂಟಿಯಾಗಿ ಪ್ರಯಾಣ ಮಾಡಿದವಳಲ್ಲ. ರಾಜಕುಮಾರಿಯಾಗಿ ಹುಟ್ಟಿ, ಧರ್ಮಪರಾಯಣನಾದ ಶಾಂತಿದೇವನೊಂದಿಗೆ ವಿವಾಹವಾಗಿ ಮಹಾರಾಣಿಯಾಗಿ ಶಾಂತಿಪುರಕ್ಕೆ ಬಂದ ಅವಳು ಎಲ್ಲಿಗೆ ಹೋದರೂ ಜತೆಯಲ್ಲಿ ಗೆಳತಿಯರೂ,



Scanned by CamScanner



ಪರಿಚಾರಕರೂ ರಕ್ಷಕ ಭಟರೂ ಇರುತ್ತಿದ್ದರು. ಅಂಥವಳಿಗೆ ಥಕ್ಕನೆ ಇಂಥ ಗತಿ ಬರುವುದೆಂದರೆ...? ಈಗ ಮಗುಚಿಬಿದ್ದ ಆಕಸ್ಮಿಕ ದುರ್ಘಟನೆಯನ್ನು ನೆನೆದು ಮೌನವಾಗಿ ರೋದಿಸಿದಳು ರಾಣಿ. ಹೆಗಲ ಮೇಲೆ ತಲೆಯಿರಿಸಿ ಮಗನು ಮೈಮರೆತು ನಿದ್ರಿಸಿ ಕೊಂಡಿದ್ದನು. ಅವನಿಗೆ ಎಚ್ಚರವಾಗಬಾರದೆಂಬ ಎಚ್ಚರಿಕೆಯಲ್ಲಿ ರಾಣಿ ಕೈಯಲ್ಲಿರುವ ದೀವಟಿದೊಂದಿಯನ್ನು ದೂರ ಹಿಡಿದೆತ್ತಿಕೊಂಡು ಎಲ್ಲಾ ಮೆಟ್ಟಿಲುಗಳನ್ನಿಳಿದು ಸುರಂಗ ಮಾರ್ಗವನ್ನು ಸೇರಿದಳು. ಕಾಡಿಗೆಯಂತಹ ಕತ್ತಲಲ್ಲಿ ಎರಡು ಮೂರು ಗಜಗಳಿಗಿಂತ ಹೆಚ್ಚು ದೂರ ಕಾಣುತ್ತಿರಲಿಲ್ಲ. ದೊಡ್ಡ ದೊಡ್ಡ ಬಂಡೆಗಳನ್ನು ಕೊರೆದು ಮಾಡಲ್ಪಟ್ಟ ಸುರಂಗ ಮಾರ್ಗವಾಗಿತ್ತು ಅದು. ಅಸಲು ರಾಜ ಪ್ರಾಸಾದದ ನಿರ್ಮಾಣವೇ ಕೆತ್ತಿ ಸಾನು ಮಾಡಿದ ಬಂಡೆಯ ಭೂಮಿಯಲ್ಲಿಯೇ ನಿರ್ಮಿಸಲಾಗಿದೆ ಎಂದು ರಾಣಿಗೆ ಗೊತ್ತಿದೆ. ಅಂತಲೇ ಈಗ ಅವಳು ಬಂಡೆಯ ಒಳಗಿನ ಮಾರ್ಗದಲ್ಲಿ ಪಯಣಿಸುತ್ತಿದ್ದಳು. ಎಷ್ಟು ದೂರ ಹೋಗಬೇಕು? ಎಲ್ಲಿಗೆ ಒಯ್ದು ಮುಟ್ಟಿಸುತ್ತದೆ? ಅಲ್ಲಿಂದ ಮುಂದೇನು ಮಾಡಬೇಕು? ಇದೆಲ್ಲಾ ಅವಳ ಮುಂದಿನ ಪ್ರಶ್ನೆಗಳು. ಅದಕ್ಕೆ ದೇವರೇ ದಾರಿ ತೋರಿಸುವನೆಂದುಕೊಂಡು ನಡೆಯುತ್ತಿದ್ದಳು.

ಸುರಂಗ ಮಾರ್ಗವು ಅಲ್ಲಲ್ಲಿ ಪಸೆಯಾಗಿಯೂ, ಒದ್ದೆಯಾಗಿಯೂ ಕಾಲಿಗೆ ತಾಗುತ್ತಿತ್ತು, ಗಾಳಿಯ ಚಲನೆ ಇರಲಿಲ್ಲ. ಒಂದು ಕಡೆಯಲ್ಲಿ ಕಾಲಿಗೇನೋ ತಗಲಿ ಬೀಳಲಿದ್ದವಳು ಹಾರಿ ಸಾವರಿಸಿಕೊಂಡಳು. ಆ ಹಾರುವಿಕೆಯಲ್ಲಿ ಕೈಯಲ್ಲಿದ್ದ ದೀವಟಿ ಕೈಜಾರಿ ದೂರಬಿದ್ದು ನಂದಿಹೋಯಿತು. ಒಮ್ಮೆಲೇ ಅವಳನ್ನು ಗಾಢಾಂತಕಾರವು ಮುತ್ತಿಗೆ ಹಾಕಿತು. ಮುಂದೆ ಅಡಿಯಿಡಲಾಗದಂತೆ ಹಾಗೆಯೇ ಸ್ತಬ್ಧಳಾಗಿ ನಿಂತುಬಿಟ್ಟಳು.

ಸ್ವಲ್ಪ ಹೊತ್ತಿಗೆ ಅವಳ ದೃಷ್ಟಿ ಕತ್ತಲೆಗೆ ಪಳಗಿಕೊಳ್ಳುತ್ತ ಮಸಮಸಕಾಗಿ ಕಾಣತೊಡಗಿತು. ದೂರದಲ್ಲಿದ್ದ ವಿಚಿತ್ರವಾದೊಂದು ಬೆಳಕು ಅದಕ್ಕೆ ಸಹಾಯಕವಾಯಿತು. ಆ ಬೆಳಕಿನ ಆಕರ್ಷಣೆಯಲ್ಲಿ ಅವಳು ಮೆಲ್ಲಮೆಲ್ಲನೆ ಮುಂದಕ್ಕೆ ನಡೆದಳು. ಆ ಬೆಳಕಿನ ವಿಷಯದಲ್ಲಿ ಗಂಡನು ಹೇಳಿದ ಮಾತು ನೆನಪಿಗೆ ಬಂತು. ಸುರಂಗದೊಳಗೆ ಅಲ್ಲಲ್ಲಿ ಗೋಡೆಯ ಬಂಡೆಗೆ ಹುದುಗಿಸಿದ ಮಣಿಯಿಂದ ಅಂತಹ ಬೆಳಕು ಬರುತ್ತಿತ್ತು! ದಾರಿಯೂ ಕಾಣುತ್ತಿತ್ತು. ಇದಕ್ಕೇ ದೇವರು ದೀವಟಿಗೆಯನ್ನು ನಂದಿಸಿದನೆಂದುಕೊಂಡಳು.

ಅಷ್ಟರಲ್ಲಿ ಮಗನು ನಿದ್ದೆಯಿಂದೆದ್ದು ಅಳಲು ತೊಡಗಿದನು. ಅವಳು ಮಗುವನ್ನು ಎದೆಗಾನಿಸಿಕೊಂಡು ತಟ್ಟುತ್ತ, ನಿದ್ದೆ ಬರುವಂತೆ ಮಾಡುತ್ತ ಬೇಗಬೇಗನೆ ನಡೆಯುತೊಡಗಿದಳು. ಅದರಿಂದಾಗಿ ರಾಣಿಗೆ ಬಹಳ ಆಯಾಸವಾಗತೊಡಗಿತು. ಮುಂದೆ ಕಾಲೆತ್ತಿ ನಡೆಯುವುದೂ ಕಷ್ಟವಾಗಿ ತೇಕತೊಡಗಿದಳು.



Scanned by CamScanner

ಆದರೂ ಸುರಂಗ ಮಾರ್ಗದಿಂದ ಹೇಗಾದರೂ ಹೊರಬೀಳಬೇಕೆಂಬ ಹಟದಲ್ಲಿ ಉಸಿರು ಬಿಗಿದು ಕೊಂಡು ನಡೆದೇ ನಡೆದಳು.

ಅಂತೂ ಸುರಂಗದ ಕೊನೇ ಗಡಿ ಬಂತು. ಹೊರಗೆ ಹೋಗುವ ಮಾರ್ಗ ಹೇಗೆ? ಅವಳ ಇದಿರಿನಲ್ಲಿ ಗೋಡೆ ಅಡ್ಡವಾಗಿತ್ತು. ಗೋಡೆಯ ನಡುವಿನಲ್ಲಿ ಕಾಂತಿಯನ್ನುಗುಳುವ ಮಣಿ ಹುದುಗಿಸಲ್ಪಟ್ಟ ಕಲ್ಲು ಹಲಗೆಯೊಂದಿತ್ತು. ಆ ಹಲಗೆಯ ಬದಿಯಲ್ಲಿದ್ದ ಒಂದು ಮೊಳೆಯನ್ನು ತನ್ನ ಬಲವನ್ನೆಲ್ಲಾ ಒಟ್ಟು ಗೂಡಿಸಿ ಕದಲಿಸಿದಾಗ, ಹಲಗೆ ಬದಿಗೆ ಸರಿದು ಕೊಂಡಿತು.

ಅಲ್ಲಿ ಏರ್ಪಟ್ಟ ದ್ವಾರದಲ್ಲಿ ಅವಳು ಒಳಗೆ ಪ್ರವೇಶಿಸಿದಳು. ಅದು ಮತ್ತೊಂದು ವಿಶಾಲವಾದ ಸುರಂಗದ ಕೋಣೆಯ ಹಾಗಿತ್ತು!

ಆದರೆ ಅದು ಕೋಣೆಯಾಗಿರದೆ ಮುಂದೆ ಮುಂದೆ ಹೋಗುವ ದಾರಿಯೇ ಆಗಿತ್ತು. ಆ ದಾರಿ ಕ್ರಮೇಣ ಸಂಕುಚಿತವಾಗುತ್ತಾ, ಸುಲಭದಲ್ಲಿ ತೆರೆಯಲಾಗುವ ಕಲ್ಲು ಬಾಗಿಲಿಂದಾಗಿ ಹೊರಗೆ ಬಂದಾಗ, ಒಂದು ಮಹಾರಣ್ಯದಲ್ಲಿ ನಿಂತಳು ರಾಣಿ!

ಅರಳು ಚೆಲ್ಲಿದಂತೆ ಬೆಳುದಿಂಗಳು ಹರಡಿತ್ತು. ಪ್ರಶಾಂತವಾಗಿ, ಗಂಭೀರವಾಗಿ, ಭಯಭ್ರಾಂತಿಯನ್ನುಂಟು ಮಾಡುವ ಅರಣ್ಯ, ತಣ್ಣಗಿನ ಗಾಳಿಯನ್ನು ಸಾಕಾಗುವಷ್ಟು ಹೀರಿಕೊಂಡಳು ರಾಣಿ. ಮಗನು ಮತ್ತೆ ಸುಖ ನಿದ್ರೆಗೆ ಬಿದ್ದನು. ಇದೊಂದು ಒಳ್ಳೆಯದಾಯಿತೆನಿಸಿತು. ಏಕೆಂದರೆ ಮಗು ಅಳತೊಡಗಿದರೆ ಯಾವ ವನ್ಯಮೃಗಗಳನ್ನಾದರೂ ಆಕರ್ಷಿಸಬಹುದಷ್ಟೆ? ಆಗ ರಾಣಿಗೆ ಹೇಳಲಾಗದಷ್ಟು ಬಾಯಾರಿಕೆಯಾಗುತ್ತಿತ್ತು. ಈ ಅಪರಾತ್ರಿಯಲ್ಲಿ ನೀರನ್ನು ಹುಡುಕಲು ಹೇಗೆ ಸಾಧ್ಯ?

ದೂರದಲ್ಲೆಲ್ಲೋ ನರಿಯ ಊಳ್ದನಿ ಕೇಳಿಸಿತು. ಬೆಳಗಾಗಲಿಕ್ಕಾಯಿತೋ ಏನೋ ಎಂದುಕೊಂಡು



ಅವಳು ಒಂದು ಬಂಡೆಯ ಮೇಲೆ ಕುಳಿತು, ಮಗುವನ್ನು ಮಡಿಲಲ್ಲಿ ಮಲಗಿಸಿಕೊಂಡಳು. ಸ್ವಲ್ಪಹೊತ್ತಿಗೆ ಎಲ್ಲಿಯೋ ನೀರು ಹರಿಯುವ ಶಬ್ದ ಕೇಳಿ ಬಂತು. ಅವಳು ಎದ್ದು ಆ ಧ್ವನಿ ಬರುವ ದಿಕ್ಕಿಗೆ ನಡೆದಳು. ಚಿಕ್ಕದೊಂದು ಬೆಟ್ಟದ ಕಾಲ್ತೊರೆ ಹರಿದೋಡುತ್ತಿದ್ದಿತು. ರಾಣಿ ಮಗುವನ್ನು ಹುಲ್ಲಿನ ನೆಲದಲ್ಲಿ ಮಲಗಿಸಿ, ಮುಖ ತೊಳೆದು ನೀರು ಕುಡಿದು ಬಂದು, ಮಗುವಿಗೆ ಹಾಲೂಡಿಸತೊಡಗಿದಳು.

ಮಗನು ಹಾಲು ಕುಡಿದು ನಗುತ್ತ, ತಾಯಿಯ ಮುಖ ನೋಡಿ, ಸುತ್ತಮುತ್ತಲಿನ ಹೊಸ ವಾತಾವರಣವನ್ನು, ವಿಚಿತ್ರವನ್ನು ನೋಡುವಂತೆ ನೋಡುತ್ತಿದ್ದಾನೆ. ಆ ಮಗುವಿನ ಮುಖವು ತಾಯಿಯ ಹೃದಯಕ್ಕೆ ಆನಂದವೆನಿಸಿತು. ಮೂಡು ದಿಕ್ಕಿನಲ್ಲಿ ಅರುಣೋದಯ ಛಾಯೆ ಕಾಣತೊಡಗಿತು. ನಾಲ್ಕು ದಿಕ್ಕುಗಳಿಂದಲೂ ಪಕ್ಷಿಗಳ ಕಲಕಲಾಲಾಪವು ಹೊರಡತೊಡಗಿತು. ತಾಯಿಯ ಸ್ತನ್ಯಪಾನ ಮಾಡಿದ



ಕಂದನು ಮಡಿಲಿನಿಂದಿಳಿದು ಹಸಿರುಹುಲ್ಲಿನ ಹೊಸ ಸ್ಥಳವನ್ನು ತುಳಿದಾಡುವುದಕ್ಕಾಗಿ ಆಚೆಗೂ ಈಚೆಗೂ ತಪ್ಪಡಿಯಿಡುತ್ತ ಆನಂದಪರವಶನಾಗುತ್ತಿದ್ದನು.

ಮಗನು ಮತ್ತಿಷ್ಟು ಮುಂದೆ ಹೋಗುವುದನ್ನು ನೋಡಿ "ಹಾಗೆ ಹೋಗಬೇಡ್ವೋ!" ಎಂದು ಕರೆದಳು ರಾಣಿ,

ಮಗನು ರಾಣಿಯನ್ನು ನೋಡಿ ನಕ್ಕು ತನ್ನ ಪಾಡಿಗೆ ಮುಂದೆ ಮುಂದೆ ನಡೆದನು. ಆಗ ರಾಣಿ ಎದ್ದು ಮಗನನ್ನು ಹಿಡಿಯಲಿಕ್ಕಾಗಿ ಎರಡಡಿ ಇಟ್ಟು ಬವಳಿ ಬಂದು ಬಿದ್ದುಬಿಟ್ಟಳು.

ಬಿದ್ದಲ್ಲೇ ಅರೆಯೆಚ್ಚರ ಅರೆ ಮೂರ್ಛೆಯಲ್ಲಿ "ಹೋಗದಿರೋ! ಬಾ ಕಂದಾ! ಬಾ, ಮಗೂ..." ಎಂದು ಹೇಳುತ್ತಲೇ ಇದ್ದಳಲ್ಲದೆ, ಏಳಲಿಕ್ಕೂ, ಕಣ್ಣು ತೆರೆದು ನೋಡಲಿಕ್ಕೂ ಅವಳಿಂದಾಗಲಿಲ್ಲ.

ಅರಣ್ಯದಲ್ಲಿ ವಾಸಮಾಡಿಕೊಂಡಿದ್ದ ಜಯಾನಂದನೆಂಬ ಮುನಿ. ಎಂದಿನಂತೆ ಸೂರ್ಯೋದಯಕ್ಕೆ ಪೂರ್ವದಲ್ಲೇ ಬೆಟ್ಟದ ತೊರೆಯ ಹತ್ತಿರದಲ್ಲಿ ಏರ್ಪಟ್ಟ ಕೊಳದಲ್ಲಿ ಸ್ನಾನ ಮಾಡಲು ಹೊರಟನು.

ಆ ಬೆಳಂಜಾವದ ಹೊತ್ತಿನಲ್ಲಿ ಕಿರು ಕಂದನ ಕೇಕೇ ಶಬ್ದವನ್ನು ಕೇಳಿ ಜಯಾನಂದನು ಅತ್ಯಾಶ್ಚರ್ಯದಿಂದ ನಿಂತು ಸುತ್ತು ಮುತ್ತಲೂ ನೋಡಿದನು. ಸುಂದರ ರೂಪದ ಹಸು ಬಾಲನೊಬ್ಬನು ಮುನಿಯನ್ನು ನೋಡಿ ನಗುತ್ತಿದ್ದಾನೆ! ಯಾವ ದಿವ್ಯ ಶಿಶುವೋ ದಿವಿಯಿಂದ ಭುವಿಗಿಳಿಯಿತೋ ಎಂದುಕೊಳ್ಳುತ್ತಾ ಆ ಕಂದನ ಸಮೀಪಕ್ಕೆ ಹೋದನು ಮುನಿ.

ಮುನಿಯನ್ನು ನೋಡಿ ಆ ಚೆಲುವಿನ ಹಸುಳೆ ಅವನನ್ನು ಕರೆಯುವಂತೆ ಕೈಯೆತ್ತೆತ್ತಿ ಆಡಿಸುತ್ತಾನೆ. ಮುನಿ ಅವನನ್ನು ಆಪ್ಯಾಯತೆಯಿಂದ ಎತ್ತಿಕೊಂಡನು. ಮಗುವಿನ ಕೊರಳಿನಲ್ಲಿ ಬಂಗಾರದ ಹಾರವಿದೆ. ಹಾರದಲ್ಲಿ ದೊಡ್ಡ ಪದಕವಿರುವುದು ಕಂಡಿತು. ಪದಕದಲ್ಲಿ ತಾವರೆ ಪುಷ್ಪವನ್ನು ಸೊಂಡಿಲಲ್ಲಿ ಹಿಡಿದ ಆನೆಯ ಚಿತ್ರವಿತ್ತು. ಇದು ರಾಜ ಕುಟುಂಬಕ್ಕೆ ಸೇರಿದ ಮಗುವೆಂದು ಮುನಿಗೆ ಗೊತ್ತಾಯಿತು.

ಮಗು ಕೈಯೆತ್ತಿ ಪಡುವಣ ದಿಕ್ಕಿನ ಕಡೆಗೆ ನೋಡುವುದನ್ನು ನೋಡಿ, ಆ ಕಡೆಗೇ ನಡೆದನು ಮುನಿ. ಒತ್ತೊತ್ತಾಗಿ ಬೆಳೆದ ಹಸಿಹುಲ್ಲಿನ ಮೇಲೆ ರಾಣಿ ಸ್ಮೃತಿತಪ್ಪಿ ಬಿದ್ದಿದ್ದಳು. ಮುನಿ ತೊರೆಯಿಂದ ನೀರು ತಂದು ಅವಳ ಮುಖಕ್ಕೆ ಚಿಮುಕಿಸಿದನು. ಅವಳು ಮೆಲ್ಲಗೆ ಕಣ್ಣು ತೆರೆದು ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದಳಾದರೂ ಸಾಧ್ಯವಾಗಲಿಲ್ಲ.

"ತಾಯೀ! ನಿಧಾನಿಸಿ ಏಳುವಿಯಂತೆ, ನೀನು ಯಾರೆಂದು ಹೇಳಲು ಸಾಧ್ಯವಾದರೆ ಹೇಳು" ಎಂದು ಬಾಗಿ ಕೇಳಿದನು.

"ಅಯ್ಯಾ, ನಿಮ್ಮ ದಯೆಯಿಂದ ಅರ್ಧ ಜೀವ ಬಂತು. ನಿಮ್ಮನ್ನು ತಂದೆಯ ಹಾಗೆ ಭಾವಿಸುತ್ತೇನೆ. ಆ ಭಗವಂತನೇ ನಿಮ್ಮನ್ನು ಇಲ್ಲಿಗೆ ಕಳಿಸಿದ್ದಾನೆ.



Scanned by CamScanner

ನಾನು ಈ ರಾಜ್ಯದ ದುರದೃಷ್ಟಳಾದ ರಾಣಿ! ಅರ್ಧರಾತ್ರಿಯ ಹೊತ್ತಿನಲ್ಲಿ ಘಾತಕತನದಿಂದ ಶತ್ರುಗಳು ಮುತ್ತಿಗೆ ಹಾಕಿ, ಅರಮನೆಯೊಳಗೆ ನುಗ್ಗಿದಾಗ, ನನ್ನ ಪತಿ ಮಹಾರಾಜರು ನನ್ನನ್ನು ಮಗುವಿನೊಂದಿಗೆ ತಪ್ಪಿಸಿಕೊಳ್ಳಲೇಬೇಕೆಂದು ಆಜ್ಞಾಪಿಸಿ, ಅವರು ಅವರು..." ಎಂದು ಮುಖ ಮುಚ್ಚಿಕೊಂಡು ಅತ್ತಳು.

"ಶಾಂತಳಾಗಮ್ಮ, ನಿನ್ನೆ ಯುವರಾಜನ ಜನ್ಮ ದಿನ ತಾನೆ?" ಎಂದನು ಮುನಿ.

"ಹೌದು ಮಹಾತ್ಮರೇ, ನಿಜ. ಶತ್ರುಗಳು ನಮ್ಮ ಮಗನ ಜನ್ಮ ದಿನೋತ್ಸವದ ವಿನೋದ ಕೂಟಗಳನ್ನೇ ತಮ್ಮ ಘಾತಕ ಕೃತ್ಯಗಳಿಗೆ ಉಪಯೋಗಿಸಿಕೊಂಡರು. ಹೀಗಾಗುವುದೆಂದು ನಾವು ಸ್ವಲ್ಪವೂ ಊಹಿಸಿರಲಿಲ್ಲ!" ಎಂದಳು ರಾಣಿ. ಅಷ್ಟು ಹೇಳುವುದಕ್ಕೇ ಅವಳಿಗೆ ಕಷ್ಟವಾಯಿತು.

"ಇನ್ನು ಮಾತಾಡಬೇಡ ಮಗಳೇ. ಅಷ್ಟು ತಿಳಿದದ್ದು ಸಾಕು. ಎಲ್ಲಾ ಗೊತ್ತಾಯಿತು. ಕಷ್ಟವನ್ನೇ ತಿಳಿಯದ ನಿನಗೆ ಇದು ಹೊಸ ಅನುಭವವಾಗಿದೆ. ಇನ್ನೇನೂ ಮಾತಾಡಬೇಡಮ್ಮ. ಶಾಂತಳಾಗು" ಎಂದನು ಮುನಿ.

ರಾಣಿ ವಿಷಾದದ ನಗೆಯನ್ನು ತೋರಿಸಿದಳು. ಹಾಗೂ ಮಾತಾಡಲು ತೊಡಗಿ, "ಅಯ್ಯಾ, ಇನ್ನು ಮೇಲೆ ಮಾತಾಡುವ ಹಾಗೆ ಆಗುವುದಿಲ್ಲವೆಂದೇ ಕಾಣುತ್ತದೆ. ನನ್ನ ಉಸಿರು ಈ ಶರೀರದಲ್ಲಿ ಉಳಿಯುವಂತೆ ಕಾಣುವುದಿಲ್ಲ ಸ್ವಾಮಿ. ಭಗವಂತನು ನಿಮ್ಮ ಮೂಲಕ ನನ್ನ ಮಗನಿಗೆ ರಕ್ಷಣೆ ಕೊಟ್ಟನೆಂದು ಅಂದುಕೊಳ್ಳುತ್ತೇನೆ. ಮಗನನ್ನು ಕಾಪಾಡಬೇಕೆಂಬುದೇ ನನ್ನವರ ಆಜ್ಞೆ. ಅದು ನೆರವೇರಿದಂತಾದುದರಿಂದ ನಾನು ಸಂತೋಷವಾಗಿ ಕಣ್ಣು ಮುಚ್ಚಬಹುದು. ಅದೇ ನನಗೆ ತೃಪ್ತಿ. ಆದರೆ ಇದರೆಡೆಯಲ್ಲೇ ತಂತು ಮಾತ್ರದ ಒಂದು ಆಶೆಯೂ ಇದೆ ಸ್ವಾಮಿ. ಮಹಾರಾಜರು ಕ್ಷೇಮದಿಂದಿರುವರೋ ಇಲ್ಲವೋ ಗೊತ್ತಾದರೆ ಒಳ್ಳೆಯದಿತ್ತು" ಎಂದಳು.

"ನಂಬು ಮಗಳೇ. ಈಗ ನೀನೇ ಹೇಳಿದಂತೆ ಭಗವಂತನ ಅನುಗ್ರಹವಿಲ್ಲದಿದ್ದರೆ ನಾನಿಲ್ಲಿಗೆ ಬರುತ್ತಿದ್ದೆನೆ? ರಾಜನಿಗೆ ಕೂಡಾ ಹಾಗೆಯೇ ರಕ್ಷಣೆ ಕಲ್ಪಿಸುವಂತೆ, ನಾವಿಬ್ಬರೂ ಭಗವಂತನನ್ನು ಪ್ರಾರ್ಥಿಸೋಣ. ಹೆದರಬೇಡ; ನಂಬು. ಭಗವದಿಚ್ಛೆಯಿಲ್ಲದೆ ಇರುವೆಯೂ ಕಚ್ಚದು" ಎಂದನು ಮುನಿ.

ಅವಳು ಮುಗುಳು ನಕ್ಕಳು. ತುಟಿಗಳು ನಗುವಿನೊಂದಿಗೇ ಸ್ತಬ್ಧವಾದುವು. ಕಣ್ಣು ಮುಚ್ಚಿಕೊಂಡುವು. ಮುನಿ ಅವಳ ನಾಡಿ ಹಿಡಿದು ನೋಡಿ, ಇನ್ನು ಇವಳು ಮುಚ್ಚಿದ ಕಣ್ಣು ತೆರೆಯಲಾರಳೆಂದು ಅರಿತುಕೊಂಡನು!

—(ಇನ್ನೂ ಇದೆ)






೬

[ಸುಮೇಧ ರಾಜ್ಯದ ಸೇನಾಧಿಪತಿ ವೀರಸಿಂಹನು ರಾಜ ಕುಟುಂಬದ ಸಮೂಲ ನಾಶಕ್ಕೆ ತಂತ್ರ ಮಾಡಿದನು. ಶಾಂತಿದೇವ ರಾಜನು ರಾಣಿಯನ್ನೂ, ತನ್ನ ಎರಡು ವಯಸ್ಸಿನ ಮಗನನ್ನೂ ಸುರಂಗ ಮಾರ್ಗದ ಮೂಲಕ ಕಳುಹಿಸಿ, ಶತ್ರುಗಳೊಂದಿಗೆ ವೀರೋಚಿತವಾಗಿ ಹೋರಾಡಿ, ನದಿಗೆ ಹಾರಿಬಿಟ್ಟನು. ಅರಣ್ಯದ ನಡುವಿಗೆ ಸೇರಿಕೊಂಡ ರಾಣಿ. ಮಗನನ್ನು ಜಯಾನಂದ ಮುನಿಗೊಪ್ಪಿಸಿ, ಕಣ್ಣು ಮುಚ್ಚಿದಳು. — ತರುವಾಯ ]

**ಭಾ**ರವನ್ನು ತನಗೆ ಒಪ್ಪಿಸಿ, ಶಾಶ್ವತವಾಗಿ ಕಣ್ಣು ಮುಚ್ಚಿದ ರಾಣಿಯ ಮುಂದೆ, ಜಯಾನಂದ ಮುನಿ ವಿಚಾರ ಮುದ್ರೆಯಲ್ಲಿ ನೋಡುತ್ತಾ, ನಿಶ್ಚಲನಾಗಿ ಕುಳಿತನು. ಆಗಲೇ ಆಲದ ಮರದ ಕೊಂಬೆಯ ಮೇಲೆ ಹಾರಿಕೊಂಡ ಕೋತಿಯೊಂದು ಕಿಚಕಿಚ ವೆಂದು ಅರಚಿತು.

ಮುನಿ ತಲೆಯೆತ್ತಿ ಅದನ್ನು ನೋಡಿ, "ಬಾ ಮಾರುತೀ ! ಇಳಿದು ಬಾ. ನಿನಗೊಬ್ಬ ಹೊಸ ಸ್ನೇಹಿತ ಬಂದಿದ್ದಾನೆ. ಚೆನ್ನಾಗಿ ಆಡುವಿಯಂತೆ. ಬಾರಪ್ಪಾ" ಎಂದು ಕರೆದನು.

ಕೋತಿ ಚಟ್ಟನೆ ಕೆಳಗೆ ಹಾರಿ ಮುನಿಯ ಪಕ್ಕದಲ್ಲಿ ಕುಳಿತುಕೊಂಡಿತು.

"ಸಮಯಕ್ಕೆ ಸರಿಯಾಗಿಯೇ ಬಂದೆಯಾ ? ಮಾರುತೀ, ನೀನು ಹೋಗಿ ಬೇಗನೇ ಭಲ್ಲೂಕಿಯನ್ನು ಕರೆದುಕೊಂಡು ಬಾ. ನಿನ್ನ ಈ ಬಾಲಮಿತ್ರನನ್ನು ಅವಳ ಕೈಗೆ ಕೊಡಬೇಕಾಗಿದೆ" ಎಂದನು ಅವರ ತಲೆದಡವಿ ಮುಗುಳು ನಗುತ್ತ.

ಕೂಡಲೇ ಕೋತಿ ಸರ್ರನೆ ಮರದ ಮೇಲೇರಿ ಕೊಂಬೆಯಿಂದ ಇನ್ನೊಂದು ಮರದ ಕೊಂಬೆಗೆ ಎಗರುತ್ತಾ ಹೋಯಿತು.



Scanned by CamScanner



ಪುಟ್ಟ ಯುವರಾಜನಿಗೆ ತನ್ನ ತಾಯಿ ಸತ್ತು ಹೋದಳೆಂಬ ಸಂಗತಿ ತಿಳಿಯದು. ಅಂತಲೇ ನಗುತ್ತಾ, ಅಚಲಳಾಗಿ ಬಿದ್ದಿರುವ ತಾಯಿಯ ಮುಖದ ಕಡೆಗೂ, ಮುನಿಯ ಮುಖದ ಕಡೆಗೂ ನೋಡುತ್ತಿದ್ದನು. ಆಗಾಗ ಕೈಯಾಡಿಸಿ "ಮಾ... ಮಾ..." ಎನ್ನುತ್ತಿದ್ದನು.

ಅವನನ್ನು ನೋಡಿ ಮುನಿ "ಯುವರಾಜಾ! ನೀನು ಬಹಳ ಧೈರ್ಯಶಾಲಿಯಪ್ಪ. ನಿನ್ನ ಜೀವನ ಕಾಲದಲ್ಲಿ ನೀನು ಏನೇನೋ ಸಾಧಿಸಬೇಕಾಗಿದೆ. ತಾಯಿಗಾಗಿ ಚಿಂತಿಸಿಕೊಂಡಿರದೆ, ಬೆಳೆದು ದೊಡ್ಡವನಾಗಿ, ಅವಳ ಮರಣಕ್ಕೆ ಕಾರಣರಾದ ಪಾಪಿಗಳನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಬೇಕು. ಹಾಗೆ ಸಾಧನೆ ಮಾಡುವಂಥ ವೀರಧೀರ ಕ್ಷತ್ರಿಯ ಕುಮಾರನೇ ನೀನು" ಎಂದನು.

ಯುವರಾಜನು ಆ ಮಾತುಗಳನ್ನು ಲಕ್ಷ್ಯಮಾಡದವನಂತೆ ಕಿಲಕಿಲ ನಕ್ಕು ಮುನಿಯ ಗಡ್ಡ ಒಡಿದು ಆಡಿಕೊಳ್ಳತೊಡಗಿದನು. ಮುನಿ ಆ ಕಂದನನ್ನು ಕೈಗಳೆಂದೆತ್ತಿ "ಮುದ್ದು ಕುಮಾರಾ, ನಿನ್ನ ಕೊರಳಲ್ಲಿರುವ ಈ ಹಾರವನ್ನು ನಿನ್ನ ಒಳಿತಿಗಾಗಿಯೇ ತೆಗೆಯುತ್ತೇನಪ್ಪಾ. ಇದರಲ್ಲಿರುವ ಪದಕವನ್ನು ನೋಡಿದರೆ ನೀನು ರಾಜಕುಮಾರನೆಂಬ ಸಂಗತಿ ಹೊರಬಿದ್ದು ಹೋಗುತ್ತದೆ. ಅದು ನಿನಗೆ ಕ್ಷೇಮವಾಗಲಾರದು" ಎಂದು ಮಗುವಿನ ಕೊರಳಿನಲ್ಲಿದ್ದ ಹಾರವನ್ನು ಮೆಲ್ಲನೆ ತೆಗೆದುಕೊಂಡನು.

ನೋಡುತ್ತಿದ್ದ ಹಾಗೆ ಮಾರುತಿ ಕೋತಿ ಅತ್ಯಂತ ಗಡಿಬಿಡಿಯ ಉತ್ಸಾಹದಲ್ಲಿ ಕೀಚುಕೀಚೆನ್ನುತ್ತ ಅಲ್ಲಿಗೆ ಬಂದು ಕುಣಿದಾಡತೊಡಗಿತು. ಮರಕ್ಕೆ ಹಾರಿ ಕೊಂಬೆಗೆ ಬಾಲ ಸಿಕ್ಕಿಸಿ ತಲೆಕೆಳಗಾಗಿ ಓಲಾಡುತ್ತ, ಬಾಲ ಯುವರಾಜನ ದೃಷ್ಟಿಯನ್ನು ಎಳೆದು ನಗಿಸತೊಡಗಿತು.

ಕೋತಿಯ ಹಿಂದೆಯೇ ಕರಡಿಯೂ ಬಂದಿತು. ಮುನಿ ಕರಡಿಯನ್ನು ನೋಡಿ, "ಅಮ್ಮಾ ಭವಾನಿ ಭಲ್ಲೂಕೀ! ಈ ಮಗುವನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕಾದ್ದು ನಿನ್ನ ಬಾಧ್ಯತೆ. ಏಕೆಂದರೆ, ಇವನನ್ನು ಹುಡುಕುವ ಶತ್ರುಗಳಿದ್ದಾರೆ. ಇವನನ್ನು ನೀನು ಹಡೆದ ಮಗುವೆಂದೇ ತಿಳಿಯಬೇಕು" ಎಂದು ಯುವರಾಜನನ್ನು ತೋರಿಸಿದನು.

ಕರಡಿ ಯುವರಾಜನ ಕಡೆಗೆ ಕೈಗಳಂತೆ ಮುಂಗಾಲುಗಳನ್ನೆತ್ತಿ ಚಾಚಿತು. ಅದರ ಹತ್ತಿರ ಹೋಗಲು ಯುವರಾಜನು ಸ್ವಲ್ಪ ಹೆದರಿದನು.

ಆಗ ಮುನಿ ಯುವರಾಜನೊಂದಿಗೆ, "ನೋಡಪ್ಪಾ, ಭವಾನೀ ಅಮ್ಮ ತುಂಬಾ ಒಳ್ಳೆಯವಳು. ನಿನ್ನನ್ನು ಅಮ್ಮನ ಹಾಗೇ ಕಾಪಾಡುತ್ತಾಳಪ್ಪ. ನೀನು ಕೇಳಿದ್ದೆಲ್ಲಾ ಕೊಡುತ್ತಾಳೆ, ದಿನಾ ತಪ್ಪದೆ ಬಹು ಚೆಂದಾಗಿ ಸ್ನಾನ ಮಾಡಿಸುತ್ತಾಳೆ. ಅವಳೂ ದಿನಾ ಮೀಯುತ್ತ ಎಷ್ಟು ಶುಭ್ರವಾಗಿದ್ದಾಳೆ ನೋಡು. ನಿನ್ನ ಬಾಯಿಗೆ ಜೇನು ನೆಕ್ಕಿಸುತ್ತಾಳೆ. ಏನೂ ಭಯವಿಲ್ಲ. ಅವಳ



Scanned by CamScanner

ಹತ್ತಿರ ಹೋಗು ಕಂದಾ ! ನಾನೂ ಆಗಾಗ ಬಂದು ನೋಡುತ್ತೇನೆ" ಎಂದನು ನಗುತ್ತ.

ಭಲ್ಲೂಕಿ ಭವಾನಿ ಕೂಡಾ ಬಾಬಾ ಎಂಬಂತೆ ತಲೆಯಾಡಿಸಿತು. ಯುವರಾಜನು ಮೆಲ್ಲಮೆಲ್ಲನೆ ಕರಡಿಯ ಕಡೆಗೆ ನಡೆದನು.

ಮುನಿ ಕರಡಿಯನ್ನು ಮಾತ್ರವಲ್ಲ, ಯಾವ ಮೃಗವನ್ನಾದರೂ ಸುಲಭವಾಗಿ ಪಳಗಿಸಿಕೊಳ್ಳು ವಂಥವನು. ಭಯಂಕರಗಳಾದ ಹುಲಿ ಸಿಂಹಗಳನ್ನು ಸಹ, ಕೆಲವೇ ಕ್ಷಣಗಳಲ್ಲಿ ತನ್ನ ದೃಷ್ಟಿ ಮಾತ್ರದಿಂದಲೇ ವಶಪಡಿಸಿ, ತಾನು ಹೇಳುವಂತೆ ಮಾಡಿಸಿಬಿಡುವ ಅಪೂರ್ವಶಕ್ತಿ ಅವನಿಗಿತ್ತು. ಆದರೆ ಈ ವಿಷಯ ಯಾರಿಗೂ ತಿಳಿಯದು. ಬೇಕೆಂತಲೇ ಅವನು ಆ ಸಂಗತಿಯನ್ನು ರಹಸ್ಯವಾಗಿಟ್ಟುಕೊಂಡಿದ್ದನು.

ಆಶ್ರಮದಲ್ಲಿ ಜಯಾನಂದ ಮುನಿಯೊಂದಿಗೆ, ಶೇಖರ ಮತ್ತು ಗೋವಿಂದ ಎಂಬ ಇಬ್ಬರು ಶಿಷ್ಯರು ಮಾತ್ರವೇ ಇದ್ದರು. ಅವರು ಧ್ಯಾನ ಪದ್ಧತಿಯನ್ನೂ ಯೋಗವನ್ನೂ ಅಭ್ಯಾಸ ಮಾಡುತ್ತ, ಗುರುಸೇವೆಯಿಂದ ಕಾಲ ಕಳೆಯುತ್ತಿದ್ದರು. ನಿಜ ಹೇಳುವುದಾದರೆ ಜಯಾನಂದ ಮುನಿಗೆ ಯಾವ ಮಾನವರ ಸಹಾಯವೂ ಬೇಕಾಗಿರಲಿಲ್ಲ. ಸೇವೆ ಮಾಡುವವರೂ ಬೇಡಿತ್ತು. ಆತನ ಕಣ್ಸನ್ನೆಗಳಿಗೇ ಬೇಕಾದ ಸೇವೆಗಳನ್ನು ಮಾಡಲು ವನ್ಯಮೃಗಗಳೆಲ್ಲವೂ ತಯಾರಾಗಿದ್ದುವು.

ಆ ದಿನ ಆ ಶಿಷ್ಯರಿಬ್ಬರೂ ಆಶ್ರಮದಲ್ಲಿರಲಿಲ್ಲ. ಯುವರಾಜನ ಜನ್ಮದಿನೋತ್ಸವದ ವಿನೋದಗಳನ್ನು ನೋಡಲು ಅವರು ಜಯಾನಂದನ ಅಪ್ಪಣೆ ಪಡೆದು ರಾಜಧಾನಿಗೆ ಹೋಗಿದ್ದರು.

ಆಪ್ಯಾಯತೆಯ ಭಾವದಲ್ಲಿ ಮುದ್ದು ಮಾಡು ವಂತೆ ಕೈನೀಡಿ ಕರೆಯುವ ಭವಾನಿ ಭಲ್ಲೂಕಿಯ ಅನುರಾಗಕ್ಕೆ ಮುಗ್ಧನಾದ ಯುವರಾಜನು ಕಿಲಿಕಿಲಿ ನಗುತ್ತ ಅವರ ಹತ್ತಿರ ಹೋದನು. ಭವಾನಿ ಕೂಡಲೇ ತನ್ನೆರಡು ಕೈಗಳಿಂದಲೂ ಮಗುವನ್ನೆತ್ತಿ ಒಂದು ಸುತ್ತು ತಿರುಗು ಹಾಕಿ ಕಂಕುಳಲ್ಲೆತ್ತಿಕೊಂಡು ನಡೆದಳು. ಕೋತಿ ಮಾರುತಿಯೂ ಆನಂದದಿಂದ





Scanned by CamScanner



ಗುರುಗಳು ಏನೂ ಹೇಳದಿರಲು, ಗೋವಿಂದನು ಮುಂದುವರಿಸಿ, "ರಾಜಕುಟುಂಬವೇ ಆಪತ್ತಿಗೆ ಸಿಕ್ಕಿ ಕೊಂಡಿತು. ಮಹಾರಾಣಿ ಸತ್ತುಹೋದಳೆಂದು ಎಲ್ಲರೂ ಹೇಳುತ್ತಾರೆ" ಎಂದನು.

"ಮಹಾರಾಜರು ಎಲ್ಲಿ ಹೋದರೋ ಏನಾದರೋ ಎಂಬುದು ಯಾರಿಗೂ ತಿಳಿಯದು" ಎಂದನು ಶೇಖರ.

ಜಯಾನಂದ ಮುನಿ ಗಾಢವಾದ ನಿಟ್ಟುಸಿರಿ ಬಿಟ್ಟು, ತನ್ನ ಹಿಂದೆ ತುಸು ದೂರಕ್ಕೆ ಕಣ್ಣು ಹರಿಯ ಬಿಟ್ಟನು. ಶಿಷ್ಯರೂ ಆ ಕಡೆಗೆ ನೋಡಿ, ಬೆಜ್ಜರ ಬಿದ್ದ ಹಾಗೆ ಹಿಂದಡಿ ಇಟ್ಟು, ಮತ್ತೆ ಮೆಲ್ಲ ಮೆಲ್ಲ ಮುಂದೆ ಹೋಗಿ ರಾಣಿಯ ಹತ್ತಿರ ನಿಂತು, "ಮಹಾರಾಣಿ ನಿಜಕ್ಕೂ ಸತ್ತಿರುವಳೇ!" ಎಂದು ಉದ್ಗಾರ ತೆಗೆದರು.

ಜಯಾನಂದನು ತಲೆಯಾಡಿಸುತ್ತ, "ಶತ್ರುಗಳ ಕತ್ತಿಯನ್ನು ತಪ್ಪಿಸಿಕೊಂಡಳಾದರೂ ಪ್ರಾಣ ಸಮಾನನಾದ ರಾಜನಿಂದ ಜನ್ಮದುದ್ದಕ್ಕೂ ದೂರವಾಗಿ ಹೋದಳು. ರಾಜನ ವಿಯೋಗವನ್ನು ಸಹಿಸಲಾಗದೆಯೇ ಈ ಗತಿಗೆ ಬಂದಿದ್ದಾಳೆ. ಮಗುವನ್ನೆತ್ತಿ ಕೊಂಡು ಇಲ್ಲಿಯವರೆಗೆ ಬಂದುದೇ ಬಹು ಹೆಚ್ಚು. ವೀರವನಿತೆಗೆ ಮಾತ್ರವೇ ಅದು ಸಾಧ್ಯ. ಮಗುವನ್ನು ನಮಗೆ ಒಪ್ಪಿಸಿ ಶಾಶ್ವತವಾಗಿ ಕಣ್ಣು ಮುಚ್ಚಿದಳು. ಯುವರಾಜನನ್ನು ಈಗ ತಾನೇ ನಮ್ಮ ಭವಾನಿ ಭಲ್ಲೂಕಿ ತೆಗೆದುಕೊಂಡು ಹೋದಳು. ಮಾರುತಿಯೂ ಅವರೊಂದಿಗೆ ಹೋಗಿದ್ದಾನೆ" ಎಂದನು ಮುನಿ.

ಶೇಖರನು ದುಃಖದ ಉಸಿರುಬಿಟ್ಟು, ಕಣ್ಣೀರು ತುಂಬಿ ಬರುತ್ತಿರಲು, ಗದ್ಗದ ಕಂಠದಿಂದ, "ವಿವಾಹ ಮಹೋತ್ಸವದಲ್ಲಿ ಮೊದಲನೇಸಾರಿ ನಾನು ಮಹಾರಾಣಿಯನ್ನು ನೋಡಿದ್ದು. ಈಗ ನಾಲ್ಕು ವರ್ಷವಾದರೂ ಆಗ ಇದ್ದ ಹಾಗೇನೇ ಈಗಲೂ ಇದ್ದಾರೆ" ಎಂದನು.

ನಟನ ಮಾಡುತ್ತ ಹಿಂದೆಯೇ ಹೋಯಿತು. ಯುವ ರಾಜನಿಗೆ ಇದೆಲ್ಲ ಹೊಸ ವಿನೋದವೆನಿಸಿತು.

ಜಯಾನಂದ ಮುನಿ ಸಂತೋಷದಿಂದ ಆ ದೃಶ್ಯವನ್ನು ನೋಡುತ್ತ ಸ್ವಲ್ಪ ಹೊತ್ತು ಹಾಗೆಯೇ ನಿಂತನು. ಅವರು ಕಣ್ಮರೆಯಾದ ಮೇಲೆ ರಾಣಿಯ ಕಾಯದ ಮೇಲೆ ಅವನ ದೃಷ್ಟಿ ತಿರುಗಿತು. ಚಿಂತೆಯ ವಿಚಾರವು ಪ್ರವಿಸತೊಡಗಿತು.

ಸ್ವಲ್ಪ ಹೊತ್ತಿಗೆ ಸೂರ್ಯೋದಯವಾಗಿ ಸುತ್ತು ಮುತ್ತಲೂ ಬೆಳ್ಳಗೆ ಪ್ರಕಾಶ ಹರಡಿತು. ಪಕ್ಷಿಗಳ ಕಲಕಲರವವು ಹೆಚ್ಚಾಯಿತು.

ಅಷ್ಟರಲ್ಲಿ ಶಿಷ್ಯರಿಬ್ಬರೂ ಆತ್ಯಾತುರದಿಂದ ಅಲ್ಲಿಗೆ ಬಂದರು. ವಿಶೇಷವೇನೆಂಬ ಪ್ರಶ್ನಾರ್ಥದಲ್ಲಿ ಗುರು ಅವರನ್ನು ನೋಡಿದನು.

"ಗುರುದೇವಾ, ತುಂಬಾ ವಿಷಾದವಾದ ವಾರ್ತೆ ಹೊತ್ತುಕೊಂಡು ಬಂದೆವು. ಹೀಗಾಗಬಾರದಿತ್ತು" ಎಂದರು ಶಿಷ್ಯರು.



Scanned by CamScanner



"ಮಹಾರಾಜರ ಹಾಗೇನೇ ರಾಣಿಯವರೂ ಪ್ರಜೆಗಳ ಮೇಲೆ ತುಂಬಾ ಕರುಣೆ ತೋರಿಸುವವರೆಂದು ಎಲ್ಲರೂ ಹೇಳುತ್ತಿದ್ದರು. ಅಂಥವರಿಗೆ ಇಂಥಾ ಸ್ಥಿತಿ ಬಂದದ್ದು ಬಹಳ ಘೋರ!" ಎಂದನು ಗೋವಿಂದನು ಕಂಬನಿ ತುಂಬಿ.

"ಈಗ ಈ ಮಹಾರಾಣಿ ನಮ್ಮ ಮೇಲೆ ಇಟ್ಟಿರುವ ನಂಬುಗೆಯನ್ನು ವ್ಯರ್ಥ ಮಾಡಕೂಡದು. ಅವಳ ಮಗನನ್ನು ಅತಿ ಜಾಗರೂಕತೆಯಿಂದ ಶ್ರದ್ಧಾಪೂರ್ವಕವಾಗಿ ಬೆಳೆಯಿಸುವುದು ನಮ್ಮ ಕರ್ತವ್ಯ ಬಾಧ್ಯತೆಯಾಗಿದೆ. ನಾವು ತುಂಬಾ ಎಚ್ಚರಿಕೆಯಲ್ಲಿರಬೇಕು" ಎಂದನು ಜಯಾನಂದ ಮುನಿ.

"ನಿಜವೇ ಗುರುದೇವಾ! ನಿಮ್ಮ ಆಜ್ಞೆ ನಮಗೂ ಶಿರೋಧಾರ್ಯವಾಗಿದೆ!" ಎಂದು ಇಬ್ಬರೂ ಕೈಮುಗಿದರು.

"ಈಗ ರಾಣಿಯ ಭೌತಿಕ ಕಾಯದ ಸಂಗತಿ ನೋಡಬೇಕು. ರಾಜನ ಗತಿ ಏನಾಗಿದೆ ಎಲ್ಲಿದ್ದಾನೆ ಎಂಬುದಾವುದೂ ನಮಗೆ ತಿಳಿಯದು. ಶತ್ರುಗಳ ಬಲವು ಎಷ್ಟರಮಟ್ಟಿನದೆಂಬುದೂ ನಾವು ತಿಳಿದಿಲ್ಲ. ಏನಿದ್ದರೂ ರಾಣಿಯ ಮರಣ ವಾರ್ತೆಯನ್ನು ರಹಸ್ಯದಲ್ಲಿರಿಸಬೇಕಾದ್ದು ಒಳ್ಳೆಯದು" ಎಂದನು ಜಯಾನಂದ ಮುನಿ.

"ಮರಣ ವಾರ್ತೆ ತಿಳಿದುಬಿಟ್ಟರೆ ಶತ್ರುಗಳಿಂದ ಏನು ಮಾಡಲು ಸಾಧ್ಯವಿದೆ? ಆಕೆ ಪ್ರಾಣದೊಂದಿಗೆ ಜೀವಿಸಿದ್ದರೆತಾನೇ ಭಯ?" ಎಂದನು ಶೇಖರ.

"ಸತ್ತವರನ್ನು ಏನು ಮಾಡಲಿಕ್ಕೂ ಸಾಧ್ಯವಿಲ್ಲವೆಂಬುದು ವಾಸ್ತವವೇ. ಆದರೆ ಅವಳು ಈ ಪ್ರಾಂತ್ಯದಲ್ಲೇ ಸತ್ತಿದ್ದಾಳೆಂದು ಗೊತ್ತಾದ ಕೂಡಲೇ ಯುವರಾಜನನ್ನು ಹುಡುಕಾಡಲು ತೊಡಗುತ್ತಾರೆ. ಹಸುಕಂದನಾದ ಯುವರಾಜನಿಗೆ ಕೇಡಾಗಬಹುದಷ್ಟೆ? ಅವನ ರಕ್ಷಣೆಯೇ ಮುಖ್ಯವಲ್ಲವೆ?" ಎಂದನು ಮುನಿ.

"ಹೌದು ಹೌದು, ಹಾಗಾದರೆ ಈಗ ರಾಣಿಯವರ ಮೃತದೇಹವನ್ನು ದಹನ ಮಾಡಬೇಕಲ್ಲವೆ? ಸಮಾಧಿ ಕಟ್ಟಬೇಕಲ್ಲವೇ?" ಎಂದು ಶಿಷ್ಯರಿಬ್ಬರೂ ಪ್ರಶ್ನೆ ಮಾಡಿದರು.

"ಅದು ರಾಣಿಯ ಅಭಿಪ್ರಾಯಾನುಸಾರವಾಗಿಯೇ ನಡೆಯಬೇಕು" ಎಂದು ಮುನಿ, ಮತ್ತೇನೂ ಹೇಳದೆ ಹೋಗಿ ಸ್ನಾನಮಾಡಿ ಬಂದು, ರಾಣಿಯ ಮೃತದೇಹದ ಪಕ್ಕದಲ್ಲಿ ಕಣ್ಮುಚ್ಚಿ ಧ್ಯಾನಕ್ಕೆ ಕುಳಿತನು.

ಸ್ವಲ್ಪ ಹೊತ್ತಿನ ಮೇಲೆ ಕಣ್ಣು ತೆರೆದು, "ಅವಳ ಕಾಯವನ್ನು ಸಮಾಧಿ ಮಾಡಬೇಕೆಂತಲೇ ಆಕೆಯ ಅಪೇಕ್ಷೆ. ಹಾಗು ತನ್ನನ್ನು ಭೂಸ್ಥಾಪನೆ ಮಾಡುವ ಮೊದಲು, ತನ್ನ ಕುಮಾರನ ಕೈಯಿಂದ ತನ್ನ ಮೇಲೆ ಕೆಲವು ಹೂಗಳನ್ನು ಇರಿಸಬೇಕೆಂದು ಅವಳು ಹೇಳುತ್ತಾಳೆ. ಪ್ರಾಣ ಹೋದ ಕೂಡಲೇ ಭೂಸ್ಥಾಪನೆ ಮಾಡುವುದು ಶುಭಕರವಲ್ಲ. ಏಕೆಂದರೆ ಭೌತಿಕ

ಕಾಯದ ಸುತ್ತಲೂ ಸ್ವಲ್ಪಕಾಲದವರೆಗೆ ಒಂದು ವಿಧವಾದ ಪ್ರಕಾಶವಿರುತ್ತದೆ. ಅದು ಜೀವಿಸಿ ಕೊಂಡಿರುವವರ ಕಣ್ಣಿಗೆ ಕಾಣಿಸುವಂತಹುದಲ್ಲ. ಆ ಪ್ರಕಾಶವು ಮಾಯವಾಗುವವರೆಗೂ ಶರೀರವನ್ನು ಹಾಗೆಯೇ ಇರಿಸಬೇಕು. ನೀವಿಬ್ಬರೂ ಇಲ್ಲಿಯೇ ಇರಿ" ಎಂದನು.

"ಕಟ್ಟಿಗೆಗಾಗಿ ಹುಡುಕಿಕೊಂಡು ಯಾರಾದರೂ ಬಂದರೆ ರಹಸ್ಯವು ಬಯಲಾದೀತಲ್ಲವೇ ಗುರು ದೇವಾ ?" ಎಂದು ಸಂದೇಹಪಟ್ಟರು ಶಿಷ್ಯರು.

"ನಿಜವೇ ನಿಮ್ಮ ಮಾತು. ಹಾಗೆ ಬರುವವರು ಒಳ್ಳೆಯವರೇ ಆದರೂ, ಗುಟ್ಟು ರಟ್ಟಾಗುವ ಸಂಭವವುಂಟು. ನಾವು ಜಾಗರೂಕತೆಯಿಂದಿರ ಬೇಕು" ಎಂದು ಜಯಾನಂದ ಮುನಿ ಕಣ್ಣುಮುಚ್ಚಿ ಕೊಂಡು ಏನೋ ಮಂತ್ರವನ್ನು ಜಪಿಸತೊಡಗಿದನು.

ನೋಡ ನೋಡುತ್ತಿದ್ದಂತೆ ದೂರದಲ್ಲಿ ಹುಲಿಗಳ ಗಾಂಡ್ರಿಕೆ ಕೇಳತೊಡಗಿತು. ಹಾಗೆಯೇ ಆ ಧ್ವನಿಗಳು ಹತ್ತಿರ ಬರತೊಡಗುತ್ತಾ ಭಯಂಕರವಾದ ಗಂಡು ಹುಲಿಯೊಂದಿಗೆ ಹೆಣ್ಣು ಹುಲಿಯೂ ಮೂರು ಮರಿಗಳೊಂದಿಗೆ ಅಲ್ಲಿಗೇ ಬಂದುವು. ದೊಡ್ಡ ಹುಲಿಗಳೆರಡೂ ಮುನಿಯ ಮುಂದೆ ತಲೆಬಗ್ಗಿಸಿ ಅವನ ಪಾದಗಳಿಗೆ ತಲೆಗಳನ್ನು ತಿಕ್ಕಿಕೊಂಡುವು. ಮೂರು ಹುಲಿಮರಿಗಳೂ ಕುಣಿಯುತ್ತ ಪ್ರದಕ್ಷಿಣೆ ಹಾಕಿದುವು. ಎರಡು ಹುಲಿಮರಿಗಳನ್ನು ಜಯಾನಂದನು ಕೈಗಳನ್ನು ಚಾಚಿ ಹತ್ತಿರ ಕರೆದುಕೊಂಡನು. ಮೂರನೆಯ ಸಣ್ಣ ಹುಲಿ ಮುನಿಯ ಹೆಗಲಿನ ಮೇಲೆ ಕುಳಿತು ಬಾಲ ಕುಣಿಸಿತು. ಮುನಿ ಅದರ ಬೆನ್ನು ತಡವಿದನು.

ಆ ಹುಲಿಗಳೊಂದಿಗೆ ಜಯಾನಂದ ಮುನಿ, "ಸೂರ್ಯನು ಮುಳುಗುವವರೆಗೂ ನೀವುಗಳು ಇಲ್ಲೇ ಇರಬೇಕು. ಸುಮ್ಮನಿರದೆ ಆಗಾಗ ಗಾಂಡ್ರಿಸಿ ಕೊಂಡಿರಬೇಕು. ಯಾವ ಮಾನವರೂ ಈ ಕಡೆಗೆ ಬರಲೇ ಕೂಡದು. ಹಾಗೆ ಯಾರಾದರೂ ಬರುವ ಹಾಗೆ ತೋರಿದರೆ ಹೆದರಿಸಿ ಓಡಿಸಿಬಿಡಿರಿ. ಇಲ್ಲಿರುವ ಶವವು ಯಾರ ಕಣ್ಣಿಗೂ ಬೀಳದಂತೆ ನೋಡಿ ಕೊಳ್ಳಿರಿ, ಅರ್ಥವಾಯಿತೆ ?" ಎಂದನು.

ಅರ್ಥಮಾಡಿಕೊಂಡ ಹಾಗೆ ದೊಡ್ಡ ಹುಲಿ ಗಳೆರಡೂ ತಲೆಯಾಡಿಸಿ, 'ಹುಂ ಹುಂ' ಎಂದುವು.

ಮುನಿ ಶಿಷ್ಯರ ಕಡೆಗೆ ನೋಡಿ, "ಇನ್ನು ನಾವು ಸರಿಯಾದ ಒಂದು ಜಾಗದಲ್ಲಿ ಹೊಂಡ ತೋಡಿ ತಯಾರು ಮಾಡಬೇಕು. ಅಷ್ಟರೊಳಗೆ ರಾಣಿಯ ಕಾಯದ ಮೇಲೆ ಪುಷ್ಪಗಳನ್ನಿರಿಸಲು, ಬಾಲ ಯುವರಾಜನನ್ನು ಇಲ್ಲಿಗೆ ಕರೆದುಕೊಂಡು ಬರಬೇಕು" ಎಂದನು. ಶಿಷ್ಯರು ಕೈಮುಗಿದು "ಶಿರಸಾಜ್ಞೆ" ಎಂದರು. —(ಇನ್ನೂ ಇದೆ)



Scanned by CamScanner




೫

[ಸುಮೇಧದ ರಾಜ ಕುಟುಂಬವನ್ನೇ ಹತಮಾಡಿ ರಾಜ್ಯಾಧಿಕಾರವನ್ನು ವಶಪಡಿಸಿಕೊಳ್ಳಬೇಕೆಂದು ಸೇನಾಧಿಪತಿ ವೀರಸಿಂಹನು ದುಸ್ತಂತ್ರ ಮಾಡಿದನು. ಶಾಂತಿದೇವ ಮಹಾರಾಜನ ಆಜ್ಞೆಯಂತೆ ರಾಣಿ ಮಗುವಿನೊಂದಿಗೆ ಸುರಂಗದ ಮೂಲಕ ಅರಣ್ಯದ ನಡುವೆ ಸೇರಿಕೊಂಡು, ಮಗನನ್ನು ಜಯಾನಂದ ಮುನಿಗೆ ಒಪ್ಪಿಸಿ ದೀರ್ಘ ನಿದ್ರೆಗೆ ಬಿದ್ದಳು. ಅತ್ತ ಶಾಂತಿದೇವನು ಕಾದಾಡಿ, ಗತ್ಯಂತರವಿಲ್ಲದೆ ನದಿಗೆ ಹಾರಿದನು. —ಇನ್ನು ಓದಿರಿ]

ಮಹಾರಾಜನ ಅರಮನೆಯೊಳಗೆ ನಡೆದ ಘೋರವಾದ ಹೋರಾಟದ ಸಂಗತಿ, ಹೊರಗೆ ಉತ್ಸವದ ವೈಭವಗಳನ್ನೂ, ವಿನೋದಗಳನ್ನೂ ನೋಡುತ್ತಿದ್ದ ಪುರಜನರ ಗುಂಪುಗಘಣಗಳಲ್ಲಿ ಒಬ್ಬನಿಗೂ ಗೊತ್ತಾಗಲಿಲ್ಲ. ಒಂದು ಕಡೆಯಲ್ಲಿ ಯುವರಾಜನ ಜನ್ಮದಿನೋತ್ಸವದ ಚಿತ್ರ ವಿಚಿತ್ರಗಳಾದ ಬಾಣ ಬೆಡಿ ದುರುಸುಗಳ ಅದ್ಭುತಗಳನ್ನು ನೋಡುವವರು ಕೆಲವರಾದರೆ, ಬೇರೆ ಕೆಲವರು ಆಟ ಪಾಟಗಳ ತಮಾಷೆಗಳನ್ನೂ, ತಾಲೀಮು, ಮಲ್ಲಯುದ್ಧ, ಕೋಲಾಟಗಳನ್ನೂ ನೋಡುವುದರಲ್ಲಿ ತನ್ಮಯರಾಗಿದ್ದರು. ಮತ್ತೆ ಕೆಲವರು ಬಣ್ಣ ಬಣ್ಣಗಳ ದೀಪಾಲಂಕಾರಗಳನ್ನು ನೋಡುತ್ತ ಆಚೀಚೆಗೆ ತಿರುಗಾಡಿಕೊಂಡಿದ್ದರು. ರಾಜ ಕುಟುಂಬಕ್ಕೆ ಬಂದ ಆಪತ್ತು ಯಾರೊಬ್ಬರಿಗೂ ತಿಳಿಯದು.

ಹೀಗೆ ಆ ರಾತ್ರಿಯ ಮೂರು ಜಾಮುಗಳು ಕಳೆದು ಹೋದುವು. ಕಾರ್ಯಕ್ರಮಗಳೆಲ್ಲಾ ಮುಗಿಯುತ್ತಾ ಬಂದುವು. ಜನರ ಗುಂಪು ಕರಗುತ್ತಾ ಹೋಯಿತು. ನೋಡಿದವರು ಹೊಗಳುತ್ತ, ರಾಜಕುಮಾರನನ್ನು ಆಶೀರ್ವಾದ ಮಾಡುತ್ತ ತಮ್ಮೊಳಗೆ ಮಾತಾಡಿಕೊಂಡೇ ಅವರವರ ಮನೆಗಳಿಗೆ ಹೋಗು



Scanned by CamScanner



ತ್ತಿದ್ದರು. ಎಲ್ಲಿ ನೋಡಿದರೂ ಸುಟ್ಟು ಮಸಿಯಾಗಿ ಬಿದ್ದ ಬಾಣ ಬೆಡಿ ದುರುಸುಗಳ ಗುರುತುಗಳು ಮಸಿ ಕಸವಾಗಿ ಬಿದ್ದಿದ್ದುವು. ನಟೀನಟರೂ, ನರ್ತಕರೂ ತಮ್ಮ ತಮ್ಮ ವೇಷಗಳನ್ನು, ಅಲಂಕಾರಗಳನ್ನು ತೆಗೆದುಹಾಕುತ್ತ, ಗಂಟುಕಟ್ಟಿಕೊಂಡು ಹೊರಡಲು ಅಣಿಯಾಗತೊಡಗಿದರು.

ಬೆಳಗಾಗುತ್ತಿರುವಾಗ ರಾಜಮಂದಿರದ ವಠಾರದೊಳಗಿನ ಕೆಲಸಗಾರರೆಲ್ಲಾ ಒಂದು ಕಡೆಯಲ್ಲಿ ಸೇರಬೇಕೆಂದು ಅವರ ಮೇಲಧಿಕಾರಿ ಅಧಿಕಾರವಾಣಿಯಿಂದ ಆಜ್ಞಾಪಿಸಿದನು.

ಆದರಂತೆ ಎಲ್ಲಾ ಕೆಲಸಗಾರರೂ ಒಂದುಗೂಡಿದ ಅಧಿಕಾರಿ ವೇದಿಕೆಯ ಮೇಲೆ ನಿಂತು, "ಈ ರಾಜ್ಯದ ಮೇಲೆ ಪೂರ್ಣಾಧಿಕಾರವು ಈಗ ಶಾಂತಿದೇವನಿಂದ, ಸೇನಾಧಿಪತಿ ವೀರಸಿಂಹರಿಗೆ ಮಾರ್ಪಟ್ಟಿರುತ್ತದೆ. ಏಕೆ ಹೀಗಾಯಿತೆಂದು ನೀವಾರೂ ಕೇಳಕೂಡದು. ಅದು ಈಗಿನ ನಮ್ಮ ಪ್ರಭುಗಳಿಗೂ, ಮೊದಲಿನ ಶಾಂತಿದೇವ ರಾಜನಿಗೂ ಸಂಬಂಧಪಟ್ಟ ವಿಷಯ. ನೀವಾರೂ ಆ ವಿಷಯದಲ್ಲಿ ಒಬ್ಬರೊಡನೆ ಒಬ್ಬರು ಚರ್ಚೆ ಮಾಡಕೂಡದು. ಈ ಸಂಗತಿಯ ಮಾತು ಯಾವುದೂ ನಿಮಗೆ ಅನಾವಶ್ಯಕ. ಹೀಗೆ ರಾಜಾಜ್ಞೆಯಾಗಿದೆ. ಇನ್ನು ಹೋಗಿ ನಿಮ್ಮ ನಿಮ್ಮ ಕೆಲಸವನ್ನು ತುಂಬ ಎಚ್ಚರಿಕೆಯಿಂದ ನೋಡಿಕೊಳ್ಳಿರಿ" ಎಂದು ಆಣತಿ ಮಾಡಿದನು.

ಎಲ್ಲಾ ಕೆಲಸಗಾರರೂ ತಲೆ ತಗ್ಗಿಸಿಕೊಂಡು, ಮೌನವಾಗಿ ತಮ್ಮ ತಮ್ಮ ಕೆಲಸಗಳಿಗೆ ಹೋದರು.

ಬೆಳ್ಳಗೆ ಬೆಳಗಾಗುವುದರೊಳಗೆ, ರಾಜ್ಯಾಧಿಕಾರದ ಬದಲಾವಣೆಯ ಸಂಗತಿ ದೇಶದ ನಾಲ್ಕು ಮೂಲೆಗಳಿಗೂ ಡಂಗುರದ ಮೂಲಕ ತಿಳಿಸಲಾಯಿತು. ಡಂಗುರ ಸಾರುವ ಭಟರನ್ನು ಎರಡು ಕಡೆಯಿಂದಲೂ ರಕ್ಷಿಸುವಂತೆ ಆಯುಧಧಾರಿಗಳಾದ ವೀರ ಸೈನಿಕರಿದ್ದರು. ಯಾರಾದರೂ ಈ ಅಧಿಕಾರದ ಬದಲಾವಣೆಯನ್ನು ಒಪ್ಪಿಕೊಳ್ಳದೆ, ಏನಾದರೂ ಮಾತು ಹೇಳಿಬಿಟ್ಟರೆ ಅವರ ತಲೆ ಹಾರಿಹೋಗುತ್ತದೆಂದು ಸೈನಿಕರು ಎಚ್ಚರಿಸಿ ಕೂಗುತ್ತಿದ್ದರು. ಆದರಿಂದ ಪ್ರಜೆಗಳಲ್ಲಿ ಭೀತಿಯೂ ಕುತೂಹಲವೂ ಹರಡತೊಡಗಿತು. ಏನೋ ಅಜೀರ್ಣದ್ದು ಹೊಟ್ಟೆಗೆ ಬಿದ್ದಂತಹ ಹೇಳಲಾಗದ ಸಂಕಟವದು.

ಇಂತಹ ಡಂಗುರವನ್ನು ಕೇಳಿ ಪ್ರಜಾ ಜನರು ದಿಗ್ಭ್ರಾಂತರಾದರು. ಒಂದೊಂದೂರಿನ ಸಂತೆಕಟ್ಟೆಯಲ್ಲಿ ಈ ಡಂಗುರದ ಶಬ್ದವನ್ನು ಕೇಳಿದ ಕೂಡಲೇ, ಒಂದೆಡೆ ಒಬ್ಬ ವೃದ್ಧನು "ಸಂತೋಷದಾಯಕವಾದ ಸಮಯದಲ್ಲಿ ಇದೆಂಥ ದುರ್ವಾರ್ತೆ! ಎಂಥಾ ಹತವಿಧಿಯಿದು!" ಎಂದು ದುಃಖದ ಬೆರಗು ಶಬ್ದ ಹೇಳಿಕೊಂಡನು.

ಮರುಕ್ಷಣವೇ ಇಬ್ಬರು ಸೈನಿಕರು ಆ ವೃದ್ಧನನ್ನು ಹಿಡಿದು ಬಂಧಿಸಿ ಅಲ್ಲಿಂದ ಎಳೆದುಕೊಂಡು ಎತ್ತಲೋ ಹೋದರು.



Scanned by CamScanner

ನಗರದ ನಡುವೆ ಒಂದು ಕಡೆ, ಡಂಗುರವನ್ನು ಕೇಳಿ ಜನರು ಗುಂಪುಗುಂಪಾಗಿ ಬಂದು ಕೂಡಿದರು. ಡಂಗುರದ ಮಾತುಗಳು ಅವರ ಮೇಲೆ ಸಿಡಿಲು ಬಿದ್ದಂತೆ ಅನಿಸಿದುವು. ಹೆದರಿಕೆಯಿಂದ ಎಲ್ಲರ ಕೈಕಾಲು ಬಾಯಿಗಳೂ ಬಿದ್ದಂತಾಗಿ ಯಾರೂ ಉಸಿರೆತ್ತಲಿಲ್ಲ.

ಆಗ ಗುಂಪಿನ ನಡುವಿನಿಂದ ಒಬ್ಬ ಯುವಕನು ಮಾತ್ರ, "ಮಹಾರಾಜರು ತಾವಾಗಿಯೇ ಮನಸ್ಸೊಪ್ಪಿ ಈ ಏರ್ಪಾಡು ಮಾಡಿದರೇ? ಈಗ ಮಹಾರಾಜರೂ, ರಾಣಿಯವರೂ, ಯುವರಾಜರೂ ಎಲ್ಲಿದ್ದಾರೆ ? " ಎಂದು ಪ್ರಶ್ನೆ ಮಾಡಿದನು.

"ಅದೆಲ್ಲಾ ನಿನಗೆ ಅಗತ್ಯವಿಲ್ಲದ ಪ್ರಶ್ನೆ !" ಎಂದನು ಡಂಗರ ಸಾರುವ ಮನುಷ್ಯ.

"ಶಾಂತಿದೇವ ಮಹಾರಾಜರ ಆಳಿಕೆಯಲ್ಲಿ ನಾವೆಲ್ಲಾ ಯಾವ ಕೊರತೆಯೂ ಇಲ್ಲದೆ ಬದುಕಿಕೊಂಡಿದ್ದೇವೆ. ಇದು ಅಂಥಾ ಮಹಾರಾಜರಿಗೆ ಸಂಬಂಧಿಸಿದ ವಿಷಯವಾದ್ದರಿಂದ, ನಮಗೆ ಸಂಬಂಧಿಸಿದ ಪ್ರಶ್ನೆಯೆಂತಲೇ ಕೇಳುತ್ತಿದ್ದೇವೆ. ನಮ್ಮ ಊರಿನವರ ಪರವಾಗಿಯೇ ಕೇಳುವುದು " ಎಂದನು ಆ ಧೈರ್ಯಶಾಲೀ ಯುವಕ.

"ಹಾಗಿದ್ದರೆ ನಮ್ಮೊಂದಿಗೆ ಬಾ. ಗೊತ್ತಾಗುತ್ತದೆ" ಎಂದನು ಡಂಗುರದ ಭಟ.

"ನಾನೇಕೆ ಬರಬೇಕು ? ನಿನ್ನಿನವರೆಗೆ ತುಂಬಾ ಆರೋಗ್ಯದಿಂದ ಆನಂದದಿಂದ ಉತ್ಸವ ನಡೆಸಿಕೊಂಡಿದ್ದ ಮಹಾರಾಜರು ಥಕ್ಕನೆ ರಾಜ್ಯಾಧಿಕಾರವನ್ನೇ ತ್ಯಜಿಸಿಬಿಡಲು ಕಾರಣವೇನು ? ಆ ಸಂಗತಿ ಕೂಡಾ ಡಂಗುರದ ಮಾತಿನಲ್ಲೇ ನಮಗೆ ಗೊತ್ತಾಗಬೇಕು !" ಎಂದನು ಆ ಯುವಕ.

ಅದಕ್ಕೆ ಆ ಡಂಗುರದವನಿಂದ ಯಾವ ಉತ್ತರವೂ ಬರಲಿಲ್ಲ. ಕೈಯೆತ್ತಿ ತನ್ನ ಅನುಚರರಿಗೆ ಸನ್ನೆ ಮಾಡಿದನು.




ಮರುಕ್ಷಣವೇ ನಾಲ್ವರು ಸೈನಿಕರು ಆ ಯುವಕನ ಮೇಲೆ ಬಿದ್ದು ಬಂಧಿಸಿ ದರದರನೆ ದೂರ ಎಳೆದುಕೊಂಡು ಹೋದರು. ಅವರಿಂದ ತಪ್ಪಿಸಿಕೊಳ್ಳಲು ಆ ಯುವಕನು ಹೆಣಗಾಡಿದರೂ ಪ್ರಯೋಜನವಾಗಲಿಲ್ಲ.

ಈ ಘಟನೆಯಿಂದ ಪರಮ ದುಷ್ಟರೇ ರಾಜ್ಯದ ಸಿಂಹಾಸನವನ್ನು ಆಕ್ರಮಿಸಿದ್ದಾರೆಂದು ಪ್ರಜೆಗಳಿಗೆ ಗೊತ್ತಾಯಿತು. ರಾಜನಿಗೂ, ರಾಜಕುಟುಂಬಕ್ಕೂ ಏನಾಯಿತೆಂಬುದು ತಿಳಿಯದೆ ಪ್ರಜೆಗಳು ಸಂಕಟಪಡತೊಡಗಿದರು. ಆದರೆ ರಾಜಕುಟುಂಬದ ಸಂಗತಿಯನ್ನು ಕುರಿತು ಯಾರಾದರೂ ಬಾಯಿಬಿಟ್ಟರೆ ಸಾಕು, ನಾನಾ ಹಿಂಸೆಗಳಿಗೆ ಗುರಿಯಾಗಬೇಕಾಗಿ ಬರುತ್ತಿತ್ತು. ಹೀಗಾಗಿ ರಾಜಧಾನಿಯಲ್ಲಿಯೂ ಇತರ ಕಡೆಗಳಲ್ಲಿಯೂ ಒಂದು ಬಗೆಯ ಸ್ಮಶಾನ ಮೌನವೂ. ಶೋಕದ ಮೂಗತನವೂ ಆವಹಿಸಿ ವಿಲಕ್ಷಣ ವಾತಾವರಣವಾಯಿತು.



ಶಾಂತಿಪುರದಲ್ಲಿ ನಡೆದ ಘೋರವಾದ ದ್ರೋಹ ಪ್ರವರ್ತನೆಯ ಸಮಾಚಾರ, ರಾಣಿಯ ತಂದೆಯಾದ ಅಮೃತಪುರಿಯ ರಾಜನಿಗೂ ಗೊತ್ತಾಯಿತು. ಆದರೆ ಸುಮೇಧ ರಾಜ್ಯದ ಸೈನಿಕ ಬಲದೊಂದಿಗೆ ಹೋಲಿಸಿದರೆ ಅಮೃತಪುರಿಯ ಸೈನಿಕ ಬಲವು ಬಹಳ ಕಡಿಮೆಯೇ. ಆದುದರಿಂದ ರಾಣಿಯ ತಂದೆ ಏನು ಮಾಡುವುದೆಂದು ತಿಳಿಯದೆ ಮಿಡುಕುತ್ತಾ, ದೊಡ್ಡ ಆಲೋಚನೆಗೆ ಬಿದ್ದನು.

ಇಲ್ಲಿ ವೀರಸಿಂಹನು ಮರುದಿನ ರಾಜಪುರೋಹಿತನನ್ನು ಕರೆಯಿಸಿ, ತನಗೆ ರಾಜ್ಯಾಭಿಷೇಕ ಮಾಡಬೇಕೆಂದು ಆಜ್ಞಾಭಾವದಲ್ಲಿ ಹೇಳಿದನು.

ಅದಕ್ಕೆ ರಾಜಪುರೋಹಿತನು, "ನಮ್ಮ ಸಾಂಪ್ರದಾಯದಂತೆ ರಾಜನು ಸತ್ತರೆ, ಅಥವಾ ವಿಶ್ರಾಂತಿ ತೆಗೆದುಕೊಂಡರೆ ಮಾತ್ರವೇ ಹೊಸ ರಾಜನಿಗೆ ಪಟ್ಟಾಭಿಷೇಕ ಮಾಡಲು ಸಾಧ್ಯ. ಅದರ ಮೇಲೆ ರಾಜನ ಅಥವಾ ರಾಜಕುಟುಂಬದ ಅಭೀಷ್ಟಾನುಸಾರವಾಗಿಯೇ ಹೊಸ ರಾಜನಿಗೆ ಪಟ್ಟಾಭಿಷೇಕವಾಗಬೇಕು. ಈ ಪರಿಸ್ಥಿತಿಯಲ್ಲಿ ಶಾಂತಿದೇವ ಮಹಾರಾಜರ ಅನುಮತಿ ಇಲ್ಲದೆ ನಾನು ರಾಜಪುರೋಹಿತನಾಗಿ ನಿಮಗೆ ಮಕುಟಾಭಿಷೇಕ ಮಾಡುವುದು ಹೇಗೆ ಸಾಧ್ಯ?" ಎಂದು ಕೇಳಿದನು.

ವೀರಸಿಂಹನು ಮಹಾ ರೌದ್ರ ದೃಷ್ಟಿಯಿಂದ ಪುರೋಹಿತನನ್ನು ನೋಡಿದನು. ಅವನ ಕಣ್ಸನ್ನೆಯಿಂದ ಮರುಕ್ಷಣವೇ ಭಟರು, ರಾಜಪುರೋಹಿತನನ್ನು ಹಿಡಿದೊತ್ತಿ ಬಂಧಿಸಿ ಒಯ್ದು ಕಾರಾಗೃಹದೊಳಗೆ ದೂಡಿಬಿಟ್ಟರು.

ಕೂಡಲೇ ಮತ್ತೊಬ್ಬ ಪುರೋಹಿತನನ್ನು ಕರೆದುಕೊಂಡು ಬರಲಾಯಿತು. ಹೆದರಿ ನಡುಗುವ ಆ ಪುರೋಹಿತನಿಂದ ವೀರಸಿಂಹನ ಮಕುಟಾಭಿಷೇಕವು ಗಡಿಬಿಡಿಯಲ್ಲಿ ನಡೆದುಬಿಟ್ಟಿತು !

ಶಾಂತಿದೇವನಿಗೆ ಆಪ್ತರೂ ವಿಶ್ವಾಸ ಪಾತ್ರರಾದವರೂ ಆಸ್ಥಾನ ಪದವಿಯಿಂದ ತೊಲಗಿಸಲ್ಪಟ್ಟರು. ಆಯಾ ಸ್ಥಾನಗಳಲ್ಲಿ ತನ್ನ ವಿಶ್ವಾಸಪಾತ್ರರಾದವರನ್ನು ನಿಯಮಿಸಿದನು ವೀರಸಿಂಹ.

ಸಭಾ ಸಮಾವೇಶವಾದ ಮೊದಲನೇ ದಿನದಲ್ಲಿ ವೀರಸಿಂಹನು ವೃದ್ಧ ಮಂತ್ರಿಯೊಂದಿಗೆ, "ಮಂತ್ರಿವರ್ಯರೇ, ರಾಜ್ಯವು ವೀರಭೋಜ್ಯವೆಂಬ ಸತ್ಯವು ನಿಮಗೆ ಗೊತ್ತೇ ಇದೆ. ಆದರೆ ಶಾಂತಿಪುರವು ಬಹಳ ಕಾಲದಿಂದ ವಿಜಯ ಯಾತ್ರೆಗೆ ಹೊರಡಲೇ ಇಲ್ಲ. ಸೈನಿಕರ ವೀರಬಾಹುಗಳಿಗೆ ತುಕ್ಕು ಹಿಡಿದಿದೆ. ನಮ್ಮ ಸೈನಿಕರೆಲ್ಲಾ ಸೋಮಾರಿತನಕ್ಕೆ ಬಲಿಯಾಗುವ ಹಾಗಾಗಿದೆ, ಇನ್ನೊಬ್ಬ ರಾಜನನ್ನು ಜಯಿಸುವುದರಲ್ಲಿರುವ ಆನಂದವನ್ನು ಅನುಭವಿಸಲಾಗದವರು ರಾಜರೆಂದು ಹೇಳಿಕೊಳ್ಳಲಿಕ್ಕೇ ಅರ್ಹರಾದವರಲ್ಲ. ಆದುದರಿಂದ ನಾವು ಪ್ರಪ್ರಥಮವಾಗಿ ಯಾವ ರಾಜ್ಯದ ಮೇಲೆ ದಂಡಯಾತ್ರೆ ಮಾಡೋಣವೆಂದು ಅನುಭವಜ್ಞರಾದ ನೀವು ಹೇಳಬೇಕು. ಇದು



Scanned by CamScanner



ಮುಖ್ಯಮಂತ್ರಿಗಳಾದ ನಿಮ್ಮ ಕರ್ತವ್ಯ" ಎಂದನು ಮೀಸೆಯನ್ನು ಉಗುರಿನಿಂದ ನೀವುತ್ತ.

ವೃದ್ಧ ಮಂತ್ರಿ ಎದ್ದು ನಿಂತು, ಸಣ್ಣಗೆ ಕೆಮ್ಮಿ ಸಿಗಂಟಲು ಸರಿಪಡಿಸಿಕೊಂಡು, "ಸೇನಾಧಿಪತಿಯೇ! ಒಂದು ವಿಷಯ..." ಎಂದು ಮಾತೆತ್ತಿದ್ದೇ ತಡ, ವೀರಸಿಂಹನು ತಡೆದು, "ನನ್ನನ್ನು ಸೇನಾಧಿಪತೀ ಎಂದು ಸಂಬೋಧಿಸಬೇಕಾದರೆ ಎಷ್ಟು ಧೈರ್ಯ! ನಿನ್ನೆಯುವರೆಗೆ ಸೇನಾಧಿಪತಿಯಾಗಿದ್ದುದಕ್ಕೆ ಈಗ ಗೊತ್ತಿದ್ದೂ ಹೀಗೆ ಸಂಬೋಧಿಸುವೆಯಾ? ಒತ್ತಿ ಹೇಳುತ್ತೇನೆ. ಈಗ ನಾನು ಸುಸಂಪನ್ನವಾದ ಸುಮೇಧಪುರಕ್ಕೆ ಇದಿರಿಲ್ಲದ ರಾಜನಾಗಿದ್ದೇನೆ. ಶಾಂತಿಪುರವೀಗ ನನ್ನ ರಾಜಧಾನಿ. ಇನ್ನು ಮೇಲೆ ನೀನು ಎಚ್ಚರಿಕೆಯಿಂದ ನನ್ನನ್ನು ಸೇನಾಧಿಪತೀ ಎಂದು ಕರೆಯದಿರುವುದು ನಿನಗೆ ಶ್ರೇಯಸ್ಕರ! ಜಾಗ್ರತೆ!" ಎಂದು ತನ್ನ ಎಡದ ಕಿವಿ ತುಂಡಾದ ವಿಷಯ ಸಭಿಕರ ಕಣ್ಣಿಗೆ ಬೀಳದಂತೆ ಕಿರೀಟವನ್ನು ಸರಿಪಡಿಸಿಕೊಂಡನು.

"ಅಪ್ಪಣೆ! ಅಪ್ಪಣೆ! ಏನೋ ಬಳಕೆಯ ದೋಷದಿಂದ ಹಾಗೆ ಸಂಬೋಧಿಸಿದೆನು. ಹಾಗಾದರೆ ನೆರೆಯ ದೇಶದ ಮೇಲೆ ದಂಡೆತ್ತುವುದಕ್ಕಿಂತಲೂ, ನಮ್ಮ ರಾಜ್ಯದೊಳಗಿನ ಪ್ರಜೆಗಳ ಸುಖ ಶಾಂತಿಗಳಿಗಾಗಿ ಶ್ರದ್ಧೆ ಹರಿಸಬೇಕಾದುದು ಹೊಸ ಪಾಲಕರ ಮೊದಲನೇ ಪ್ರಧಾನ ಕರ್ತವ್ಯವೆಂದು ನನ್ನ ಅಭಿಪ್ರಾಯ" ಎಂದನು ವೃದ್ಧಮಂತ್ರಿ.

"ನಿಮ್ಮ ಅಭಿಪ್ರಾಯ ಏನಾದರಿರಲಿ, ಅದೀಗ ಉಪಯೋಗವಿಲ್ಲ. ಈಗ ಕೊನೆಯ ನಿರ್ಣಯ ನಮ್ಮದೇ. ಆದರೆ ನೀವು ಮಹಾರಾಜನಾಗಿರುವ ನನ್ನನ್ನು ಮಹಾಪ್ರಭುವೆಂದು ಸಂಬೋಧಿಸಬೇಕೆಂಬುದು ಮುಖ್ಯ ಎಚ್ಚರಿಕೆ! ಮರೆಯಬೇಡಿರಿ!" ಎಂದನು ಕೋಪದಿಂದ ವೀರಸಿಂಹ.

"ಅಪ್ಪಣೆ! ಮಹಾಪ್ರಭು! ನಾನು ಮುದುಕನಾಗಿ ಹೋಗಿದ್ದೇನೆ. ಹಳೆಯ ಅಭ್ಯಾಸ ಮಾರ್ಪಡಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಆದ್ದರಿಂದ ಅಪ್ಪಣೆ ಕೊಟ್ಟರೆ ಮಂತ್ರಿಯ ಬಾಧ್ಯತೆಯಿಂದ ತೊಲಗಿ ವಿಶ್ರಾಂತಿಯಿಂದ ಶೇಷಾಯುಷ್ಯ ಕಳೆಯುತ್ತೇನೆ" ಎಂದನು ಮಂತ್ರಿ.

"ಮಂತ್ರಿ ಪದವಿಯಿಂದಲ್ಲ. ನಾನು ಮನಸ್ಸು ಮಾಡಿದರೆ ನಿಮಗೆ ಜೀವನದಿಂದಲೇ ಚಿರ ವಿಶ್ರಾಂತಿ ಕೊಡಬಲ್ಲೆನು ಮಹಾಮಂತ್ರೀ!" ಎಂದು ಆಗ್ರಹಾವೇಶದಲ್ಲಿ ಗರ್ಜಿಸಿದನು ವೀರಸಿಂಹ.

ಮಂತ್ರಿ ಮತ್ತೇನೂ ಹೇಳದೆ ನಿಮ್ಮಿಷ್ಟದಂತೆಯೇ ಮಾಡಬಹುದೆಂದು ಕೈಗಳಿಂದ ಸೂಚಿಸಿದನು.

"ಈ ಕ್ಷಣದಲ್ಲೇ ನಿನ್ನನ್ನು ಮಂತ್ರಿ ಪದವಿಯಿಂದ ತೆಗೆದು ಹಾಕಿದ್ದೇನೆ" ಎಂದನು ಒತ್ತು ದನಿಯಲ್ಲಿ ವೀರಸಿಂಹ.

ವೃದ್ಧಮಂತ್ರಿ ಕೂಡಲೇ ಇಡೀ ಸಭೆಗೆ ಕೈಮುಗಿದು ಹೊರಗೆ ಹೋಗಿಬಿಟ್ಟನು. ಹೋಗುವ ಮಂತ್ರಿಯನ್ನು ನೋಡಿ ವೀರಸಿಂಹನು ಪರಿಹಾಸವಾಗಿ



Scanned by CamScanner

ನಕ್ಕನು. ಅದನ್ನನುಸರಿಸಿ ಸಭೆಯವರೆಲ್ಲರೂ ಗಹಗಹನೆ ನಕ್ಕರು. ಅವರೆಲ್ಲ ವೀರಸಿಂಹನ ಕಡೆಯವರೇ ಆಗಿ, ಆ ನಗುಗಳು ಒಮ್ಮೆಗೇ ಸಭೆಯ ಗೋಡೆಗಳಿಗೆ ತಾಗಿ ಮಾರ್ದನಿಗೊಟ್ಟಿತು.

ವೃದ್ಧ ಮಂತ್ರಿ ಆ ದಿನ ಸಾಯಂಕಾಲ ಎಂದಿನಂತೆ ನಗರದ ಹೊರಗಿದ್ದ ಶಿವಾಲಯಕ್ಕೆ ಹೋಗಿ, ಇಷ್ಟ ದೈವದರ್ಶನ ಮಾಡಿಕೊಂಡು ಹಿಂದಿರುಗುತ್ತಿದ್ದನು. ಸೂರ್ಯಾಸ್ತಮಾನವಾಗಿ ಆಗಲೇ ಕತ್ತಲೆ ಹರಡಿಕೊಂಡು ಬರುತ್ತಿತ್ತು. ಇಕ್ಕಡೆಗಳಲ್ಲಿ ದೊಡ್ಡ ದೊಡ್ಡ ಮರಗಳೂ, ಪೊದರುಗಳೂ ಇರುವ ದಾರಿಯದು.

ಅಂತಹ ಒಂದು ದೊಡ್ಡ ಪೊದರಿನ ಮರೆಯಿಂದ ಮೂವರು ಭಟರು ಮುಂದಕ್ಕೆ ಹಾರಿದರು. ಒಬ್ಬ ಭಟನು ಮಂತ್ರಿಯ ಕೈಗಳನ್ನು ಹಿಡಿದನು. ಮತ್ತೊಬ್ಬನು ಕೂಗಲಾಗದಂತೆ ಮಂತ್ರಿಯ ಬಾಯಿಯನ್ನು ಬಲವಾಗಿ ಒತ್ತಿದನು. ಮೂರನೆಯವನು ದಾರಿ ತೋರಿಸಿಕೊಂಡು ಹೋಗಲು, ಮಂತ್ರಿಯನ್ನು ದರದರನೆ ನಿರ್ಮಾನುಷ್ಯವಾದ ಪ್ರದೇಶಕ್ಕೆ ಎಳೆದುಕೊಂಡು ಹೋದರು.

ಅವರ ಹಿಡಿಕೆಯಿಂದ ತಪ್ಪಿಸಿಕೊಳ್ಳುವ ಶಕ್ತಿ ಮಂತ್ರಿಗೆ ಇರಲಿಲ್ಲ. ಆದುದರಿಂದ ಬಂದದ್ದು ಬರಲಿ, ಗೋವಿಂದನ ದಯವೊಂದಿರಲೆಂಬ ಹಾಗೆ ಸುಮ್ಮನಾಗಿಬಿಟ್ಟನು ಮಂತ್ರಿ. ಮೂರನೇ ಭಟನ ಕೈಯಲ್ಲಿ ಕತ್ತಿ ತಳಕ್ಕನೆ ಮಿಂಚಿತು. ಅವನು ಕತ್ತಿಯನ್ನು ಮಂತ್ರಿಯ ಕುತ್ತಿಗೆಗೆ ಗುರಿಯಿಟ್ಟು ಮೇಲೆತ್ತಿದನು. ಮರುಕ್ಷಣದಲ್ಲೇ ಅವನ ಕತ್ತಿ ಕೈತಪ್ಪಿ ದೂರದಲ್ಲಿದ್ದ ಬಂಡೆಯ ಮೇಲೆ ಖಂಗನೆ ಬಿತ್ತು. ಅವನು 'ಹಾ!' ಎಂದು ಕೂಗಿ ಹಿಂದಿರುಗಿ ನೋಡಿದನು. ಉಳಿದ ಭಟರು ಕೂಡಾ ಏನಾಯಿತೆಂದು ಸುತ್ತುಮುತ್ತ ಪರೀಕ್ಷಿಸಿ ನೋಡಿದರು. ಆ ಮೂವರಿಗೂ ಪೂರ್ತಿ ನೋಡಿ ಮುಗಿಸಲಾಗದಂತೆ, ಮತ್ತೆ ಹಾರಿಬಿದ್ದ ಕತ್ತಿಯ ಒಂದೇ ಏಟಿಗೆ ಮೂವರ ತಲೆಗಳೂ ಒಮ್ಮೆಗೇ ಹಾರಿ ನೆಲಕ್ಕೆ ಬಿದ್ದುವು.

ಮಿಂಚಿನ ವೇಗದ ಖಡ್ಗ ಚಾಲನೆಯಿಂದ ಮೂವರನ್ನೂ ಹತಮಾಡಿದ ಮರ್ಮವೀರನು ಮಂತ್ರಿಯೊಂದಿಗೆ, "ಭಯವಿಲ್ಲ, ನಾಳೆ ಬೆಳಗಾಗುವವರೆಗೂ ಈ ಹಂತಕರ ಮರಣದ ಸಂಗತಿ ಯಾರಿಗೂ ಗೊತ್ತಾಗುವುದಿಲ್ಲ. ಈ ರಾತ್ರಿಯಲ್ಲಿಯೇ ನೀವು ಈ ರಾಜ್ಯವನ್ನು ಬಿಟ್ಟು ಹೋಗಿ ಅಮೃತಪುರಿಯನ್ನು ಸೇರಿಬಿಡಿ!" ಎಂದನು.

"ನೀವು..." ಎಂದು ವೃದ್ಧ ಮಂತ್ರಿ ಕೃತಜ್ಞತೆಯಿಂದ ಮತ್ತೇನೋ ಹೇಳಲು ಅವನು ಬಿಡದೆ "ಏನೂ ಮಾತಾಡದಿರಿ!" ಎಂದು ಹೇಳಿದವನೇ ಆ ಮರ್ಮವೀರನು ಕತ್ತಲೆಯೊಳಗೆ ಕಲೆತು ಮಾಯವಾಗಿಬಿಟ್ಟನು.

—(ಇನ್ನೂ ಇದೆ)



Scanned by CamScanner




೭

[ಸೇನಾಧಿಪತಿ ವೀರಸಿಂಹನು ಸುಮೇಧ ರಾಜ್ಯವನ್ನು ಆಕ್ರಮಿಸಿಕೊಂಡನು. ರಾಜನಿಗೂ ರಾಜಕುಟುಂಬಕ್ಕೂ ಏನಾಯಿತೆಂದು ಪ್ರಶ್ನೆ ಮಾಡಿದ ಯುವಕನನ್ನು ಭಟರು ಬಂಧಿಸಿದರು. ವೀರಸಿಂಹನನ್ನು ರಾಜನೆಂದು ಅಂಗೀಕರಿಸಲು ತಿರಸ್ಕರಿಸಿದ ವೃದ್ಧ ಮಂತ್ರಿಯನ್ನು ಕೊಂದುಹಾಕಲು ರಹಸ್ಯದ ಕುತಂತ್ರ ನಡೆಯಿತು. ಆದರೆ ಸಮಯಕ್ಕೆ ಒಬ್ಬ ಮರ್ಮವೀರನು ಪ್ರತ್ಯಕ್ಷನಾಗಿ ವೃದ್ಧ ಮಂತ್ರಿಯನ್ನು ಕಾಪಾಡಿದನು. —ಆಮೇಲೆ]

ಮರುದಿನ ಸೂರ್ಯೋದಯದ ವೇಳೆಯಲ್ಲಿ ರಾಜಪದವಿಯನ್ನು ವಹಿಸಿಕೊಂಡ ವೀರಸಿಂಹನು ರಾಜೋದ್ಯಾನದಲ್ಲಿ ಹಳೆಯ ರಾಜನಾಗಿದ್ದ ಶಾಂತಿ ದೇವನ ನಡಿಗೆಯನ್ನು ಅನುಕರಿಸುತ್ತ ಅತ್ತಲೂ ಇತ್ತಲೂ ನಡೆದುಕೊಂಡಿದ್ದನು. ಆದರೂ ಶಾಂತಿ ದೇವನ ರಾಜ ಗಾಂಭೀರ್ಯದ ಠೀವಿ ಅವನಿಗೆ ಹೊಂದಿಬರಲಿಲ್ಲ.

ಆದರೂ ಮತ್ತೆ ಮತ್ತೆ ಬಿಡದೆ ಸೇನಾಧಿಪತಿಯ ಪಾದಪ್ಪಳಿಕೆಯ ಗತಿಯನ್ನು ಹದಕ್ಕೆ ತರಲು ಪ್ರಯತ್ನ ಮಾಡುತ್ತಿದ್ದನು. ಸೂರ್ಯೋದಯದ ವೇಳೆಯಲ್ಲಿ ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಿಸುವುದರಲ್ಲಿ ಶಾಂತಿದೇವನಿಗೆ ಪ್ರತ್ಯೇಕ ಅಕ್ಕರೆ ಇದ್ದಿತೆಂದು ವೀರಸಿಂಹನಿಗೆ ಗೊತ್ತು. ಪ್ರಕೃತಿ ದೇವಿಯ ಮೇಲೆ ಶಾಂತಿದೇವನಿಗೆ ತುಂಬಾ ಪ್ರೇಮ. ಅದರ ಮೇಲೆ ಅವನ ಹೃದಯದಲ್ಲಿ ತಿಲಮಾತ್ರವೂ ಭಯವಿರುತ್ತಿದ್ದಿಲ್ಲ. ಆದುದರಿಂದ ಅವನ ನಡಿಗೆಯಲ್ಲಿ ಸಾತ್ವಿಕ ಪೂರಕದ ಗತಿ ಇದ್ದಿತು. ಕಳ್ಳ ಸುಳ್ಳ ಮೋಸಗಾರರ ನಡಿಗೆಯ ಗತಿ ಬೇರೆಯೇ ತಾನೆ?

ವೀರಸಿಂಹನು ಮಾಡಿದ ಕೆಲಸ ಕಳ್ಳತನದಂತಹುದೇ, ಅದಕ್ಕಿಂತಲೂ ಕ್ರೂರವೇ ಆದುದರಿಂದ



Scanned by CamScanner




ಶಾಂತಿದೇವನ ರಾಜನಡಿಗೆ ಅವನಿಗೆ ಹೇಗೆ ಬಂದೀತು? ಪ್ರಕೃತಿ ಪ್ರೇಮವನ್ನೂ ಅವನರಿಯನು. ತನ್ನನ್ನು ತಾನೇ ಪ್ರೇಮಿಸುವುದರ ಹೊರತು ಪ್ರಪಂಚದಲ್ಲಿ ಬೇರೆ ಯಾರ ಮೇಲೆಯೂ ಅವನಿಗೆ ಪ್ರೇಮವಿಲ್ಲ. ಈಗಂತೂ ಯಾವ ಕ್ಷಣದಲ್ಲಿ ಯಾವ ಕಡೆಯಿಂದ ಏನು ಆಪತ್ತು ಬರುತ್ತದೋ ಎಂಬ ಭಯವೇ! ತಾನು ಕೊಲ್ಲಲಾಗದೆ ಜಾರಿಹೋದ ಶಾಂತಿದೇವನು ಏನಾದನು? ರಾಜ್ಯದಲ್ಲಿ ತನ್ನನ್ನು ಒಲ್ಲದವರು ಯಾರು ಯಾರಿದ್ದಾರು! ಅಂಥವರೆಲ್ಲ ಒಂದಾಗಿ ಕೂಡಿ ತನ್ನ ಮೇಲೆ ತಂತ್ರಚಕ್ರ ತಿರುಗಿಸಿಬಿಡುವರೇನೋ? ಈ ಬಗೆಯ ಕೆಟ್ಟ ಕೆಟ್ಟ ಭಯಗಳು ಅನುಕ್ಷಣವೂ ಮನಸ್ಸಿನಲ್ಲಿರುವಾಗ ರಾಜನಡಿಗೆ ಹೇಗೆ ಬಂದೀತು? ಕಳ್ಳನ ಜೀವ ಹುಳ್ಳಗೆ ತಾನೆ?

"ಮಹಾಪ್ರಭೂ!" ಎಂಬ ಶಬ್ದದಿಂದ ಧಿಡುಕ್ಕನೆ ತಿರುಗಿ ನೋಡಿದನು. ಕೋತ್ವಾಲನು ಬಹು ವಿಧೇಯತೆಯಿಂದ ಅವನ ಹತ್ತಿರ ಬರುತ್ತಿದ್ದನು.

"ನಿಜಕ್ಕೂ ನಡೆದುದೇನೆಂದು ಹೇಳು!" ಎಂದು ಗದರಿಸಿ ಕೇಳಿದನು ವೀರಸಿಂಹ.

ಕೋತ್ವಾಲನು ಸುತ್ತಮುತ್ತಲೂ ನೋಡಿ, ಯಾರೂ ಇಲ್ಲವೆಂಬುದನ್ನು ದೃಢಪಡಿಸಿಕೊಂಡು, "ಆ ವೃದ್ಧ ಮಂತ್ರಿ ನಮ್ಮ ಭಟರಿಂದ ತಪ್ಪಿಸಿಕೊಂಡು ಹೋಗಿಬಿಟ್ಟನು ಪ್ರಭೂ! ಅವನು ಎಂಥ ಮಾಯಾವಿಯೋ?" ಎಂದನು ಮೆಲ್ದನಿಯಿಂದ.

"ಏನೇನು! ಏನು! ಮುದಿ ಮಂತ್ರಿ ತಪ್ಪಿಸಿಕೊಂಡನೆ? ನೀನು ಆ ಕೆಲಸಕ್ಕೆ ಮೇಕೆಗಳನ್ನು ನಿಯಮಿಸಿದ್ದೆಂದಾಯಿತು. ಹೇಗೆ ತಪ್ಪಿಸಿಕೊಂಡಿತು ಆ ಮುದಿ ಗೂಬೆ? ನಿನ್ನಿಂದ ಹೇಗಾಯಿತು ಅಂಥಾ ತಪ್ಪು? ನಿಜ ಹೇಳು!" ಎಂದನು ವೀರಸಿಂಹನು ಕಾಲಪ್ಪಳಿಸಿ.

"ಆ ಸಂಗತಿಯನ್ನು ಹೇಳಲಿರುವ ಭಟರೇ ಜೀವದಲ್ಲಿಲ್ಲ. ಆ ಮೂವರೂ ರುಂಡ ಕಳೆದುಕೊಂಡು ಮುಂಡಗಳಾಗಿ ಬಿದ್ದಿದ್ದಾರೆ ಪ್ರಭೂ! ರಕ್ಕಸರಂಥವರಿಗೇ ಹಾಗಾಯಿತು!' ಎಂದು ಕೋತ್ವಾಲನು ಭಯಮಿಶ್ರಿತನಾಗಿ ವೀರಸಿಂಹನಿಗೆ ಹೇಳಿದನು.

"ಛೀ ಛೀ! ರಕ್ಕಸ ವೇಷದವರನ್ನು! ನೀನು ಕಳಿಸಿದ್ದು ಕುರಿಮರಿಗಳೇ ಎನ್ನಬೇಕು!" ಎಂದು ವೀರಸಿಂಹ ಕೋಪಾವೇಶದಿಂದ ಹಲ್ಲು ಕಡಿದು ಕೈ ಕೈ ಹಿಸುಕಿಕೊಂಡನು.

"ಪ್ರಭುಗಳು ಕ್ಷಮಿಸಬೇಕು. ಏನು ಹೇಗೆಂಬುದು ತಿಳಿಯದಿದ್ದರೂ ಬೆಳಗಾಗುವಷ್ಟರಲ್ಲಿ ನಗರದ ಹೊರಗಿನ ಮೇರೆಯಲ್ಲಿ ನಮ್ಮ ಮೂವರು ಕೊಲೆಗಡುಕ ಭಟರೂ ಸತ್ತುಬಿದ್ದಿದ್ದರು. ಒಂದು ಮಾತು ನಿಶ್ಚಯ. ನಮ್ಮ ಆ ಭಟರನ್ನು ಮಂತ್ರಿ ಕೊಂದದ್ದಲ್ಲ. ಆ ಮಂತ್ರಿ ಕತ್ತಿ ಹಿಡಿದುದನ್ನು ನಾವು ನೋಡಿರಲಿಲ್ಲವಷ್ಟೆ? ಕತ್ತಿ ಹಿಡಿದರೂ ಸಾಧ್ಯವಿಲ್ಲದ ನಿಃಶಕ್ತ ಬೇರೆ. ಅವನು ಎಂದಿನಂತೆ ಆ ಪ್ರಾಂತ್ಯದ ಗುಡಿಗೆ ಹೋಗುವಾಗ ನಿರಾಯುಧನಾಗಿಯೇ ಇದ್ದನು.



Scanned by CamScanner

ಅಂತಹ ವೃದ್ಧ ಮಂತ್ರಿ ಯೋಧರಾದ ಮೂವರು ವೀರಭಟರನ್ನು ಮಹಾ ವೀರನಂತೆ ಹತಮಾಡಿದ ನೆಂದರೆ ನಂಬಲಾಗುವುದಿಲ್ಲ ಪ್ರಭೂ. ಆ ಕೆಲಸ ಬೇರೆ ಯಾರೋ ಮಾಡಿರಬೇಕೆಂದು ನನಗೆ ತೋರು ತ್ತದೆ" ಎಂದನು ಕೋತ್ವಾಲ.

"ಯಾರು ಮಾಡಿದರೆಂದು ನಿನಗೆ ತೋರು ತ್ತದೆ ?" ಎಂದು ಕೇಳಿದನು ವೀರಸಿಂಹ.

"ಅದೇ ತಿಳಿಯಲಿಲ್ಲ ಪ್ರಭೂ. ಆ ನಿಜವನ್ನು ತಿಳಿಯಲಿಕ್ಕಾಗಿ ನಮ್ಮ ಗೂಢಚಾರರನ್ನು ನಿಯಮಿಸಿ ದ್ದೇನೆ" ಎಂದನು ಕೋತ್ವಾಲ. ಆ ವಿಷಯದಲ್ಲಿ ತಾನು ಅತ್ಯಂತ ಶ್ರದ್ಧೆಯಲ್ಲಿರುವಂತಹ ಭಾವನೆಯಲ್ಲಿ ಮಾತಾಡಿದನು.

ವೀರಸಿಂಹನು ಮೌನವಾಗಿ ನಿಂತಲ್ಲೇ ನಿಂತು, ಹಾಗೆಯೇ ಮುಷ್ಟಿ ಬಿಗಿದುಕೊಂಡು, "ಈ ಅಪಾಯ ವನ್ನು ನಾವು ಮೊಗ್ಗಿನಲ್ಲೇ ಚಿವುಟಿ ಬಿಸುಡಬೇಕು. ಬೆಳೆದುಬಿಟ್ಟರೆ ಪ್ರಾಣಕ್ಕೇ ಬರುತ್ತೆ. ನಮಗೆ ವ್ಯತಿರೇಕ ವಾಗಿ ಏನೋ ತಂತ್ರ ನಡೆಯುತ್ತದೆಂಬುದು ನಿಜ. ತಂತ್ರಗಾರರೆಲ್ಲರೂ ಒಂದಾಗಿ ಸೇರಿ ತಿರುಗಿ ಬೀಳು ವುದರೊಳಗೆ ನಾವು ಅವರೆಲ್ಲರ ಬೇರು ಹರಿದು ಬಿಡಬೇಕು...ಹೌದು. ನಿನ್ನೆ ನಮ್ಮ ಭಟರ ಹತ್ತಿರ ಶಾಂತಿದೇವನನ್ನು ಕುರಿತು ಕೇಳಿದ ಆ ಪೋರ ಎಲ್ಲಿದ್ದಾನೆ ? ಅವನು ತಂತ್ರಗಾರರಲ್ಲಿ ಒಬ್ಬನಾಗಿರ ಬೇಕು" ಎಂದನು.

"ಆ ಯುವಕನ ಹೆಸರು ವಸಂತ. ಆದರೆ ಅವನು ಸಂಚಿನೊಳಗಿನವನ ಹಾಗೆ ಕಾಣುವುದಿಲ್ಲ ಪ್ರಭೂ. ರಾಜ್ಯಾಧಿಕಾರವನ್ನು ಥಕ್ಕನೆ ತಾವು ವಶಪಡಿಸಿ ಕೊಂಡದ್ದರಿಂದ, ಇನ್ನೂ ಅದನ್ನೇ ಕೇಳುತ್ತಾ ಇದ್ದಾನೆ, ಅದನ್ನೇಕೆ ಮುಚ್ಚಿಡುವುದು ಅಂತ. ಶಾಂತಿದೇವನ ಬಗ್ಗೆ ಕ್ಷೇಮವನ್ನು ಕೇಳುತ್ತಲೇ ಇದ್ದಾನೆ. ಅದು ಸಾಧಾರಣವಾಗಿ ಪ್ರಜೆಗಳು ಕೇಳುವ ಪ್ರಶ್ನೆ ತಾನೆ ?" ಎಂಧನು ಕೋತ್ವಾಲ.



"ನೀನು ಹುಚ್ಚನ ಹಾಗೆ ಮಾತಾಡಬೇಡ. ಪ್ರಜೆ ಗಳಂತೆ ಪ್ರಜೆಗಳು ! ಪ್ರಜೆಗಳು ಗೆದ್ದವರ ಬಾಲ ಹಿಡಿಯುವವರು ! ನಮ್ಮ ಅಧಿಕಾರವನ್ನು ಪ್ರಶ್ನಿ ಸುವ ಧೈರ್ಯ ಆ ಒಬ್ಬಂಟಿಗನಿಗೆ ಹೇಗೆ ಬಂದಿತು ? ಅಡಿಯಿಂದ ಮುಡಿವರೆಗೆ ಚಿತ್ರಹಿಂಸೆ ಮಾಡಿಸು. ನಿಜ ಕಕ್ಕುತ್ತಾನೆ" ಎಂದನು ವೀರಸಿಂಹ.

"ಸುಮ್ಮನೆ ಬಿಟ್ಟೆನೆಂದುಕೊಂಡಿರಾ ಪ್ರಭೂ ? ಬಗೆಬಗೆಯಾಗಿ ಹಿಂಸೆಗೆ ಗುರಿಪಡಿಸಿದೆನು. ಅವನ ಶರೀರವೆಲ್ಲಾ ಬಾಸುಂಡೆಗಳೇ. ಪ್ರಯೋಜನವಿಲ್ಲ" ಎಂದನು ಕೋತ್ವಾಲ.

"ಹಾಗಿದ್ದರೆ ಕೂಡಲೇ ಅವನನ್ನು ಹತಮಾಡಿ ಬಿಡು. ಆ ನೀಚನನ್ನು ನಗರ ಬೀದಿಯಲ್ಲಿ ಎಳೆದು ಕೊಂಡು ವಧ್ಯಭೂಮಿಗೆ ಒಯ್ದು ಹತಮಾಡು. ಅದನ್ನು ನೋಡಿ ಎಲ್ಲರೂ ಹೆದರಿ ನಡುಗಿ ಸುಮ್ಮ ನಾಗುತ್ತಾರೆ. ಇದಕ್ಕೆ ಅದೇ ತಕ್ಕ ಮದ್ದು" ಎಂದು ಆಜ್ಞೆ ಮಾಡಿದನು ವೀರಸಿಂಹ.



Scanned by CamScanner

"ಅಪ್ಪಣೆ ಮಹಾಪ್ರಭೂ! ಅದಕ್ಕೇ ಬಂದೆ" ಎಂದು ಕೋತ್ವಾಲನು ಬಾಗಿ ವಂದಿಸಿ ಹೊರಟು ಹೋದನು.

ಹೊಸ ರಾಜನ ಮೇಲೆ ಇದಿರು ತಿರುಗುವ ವಸಂತನ ಮೇಲೆ ಗಲ್ಲಿನ ಶಿಕ್ಷೆ ವಿಧಿಸಿದಂತೆ ಆಗಿಂದಾಗಲೇ ನಗರದೊಳಗೆ ಡಂಗುರ ಹೊಡೆಸಲಾಯಿತು. ನಗರಕ್ಕೆ ಹೊಂದಿಕೊಂಡಿರುವ ವಿಶಾಲವಾದ ಮೈದಾನದಲ್ಲಿ ಅವನನ್ನು ಗಲ್ಲಿಗೇರಿಸಲು ತಕ್ಕ ಏರ್ಪಾಡು ನಡೆಯುತೊಡಗಿತು. ಸಂತೋಷದ ಸುದ್ದಿಯಂತೆ ಭಯದ ಸುದ್ದಿಯೂ ಜನರನ್ನು ಕೂಡಿಸುವಂಥಾದ್ದೆ.

ಆ ದಿನ ಮಧ್ಯಾಹ್ನದಲ್ಲಿ ಕಾರಾಗಾರದಿಂದ ನಗರ ಬೀದಿಗಳಲ್ಲಿ ವಸಂತನ ಮೆರವಣಿಗೆ ಹೊರಟಿತು.

ಆ ಸಮಯದಲ್ಲಿ ನಗರ ಪ್ರಜೆಗಳೆಲ್ಲರೂ ತನಗೆ ಭಯಭಕ್ತಿಯಿಂದ ಗೌರವ ತೋರಿಸಬೇಕೆಂದು ಕೊಂಡು ಕೋತ್ವಾಲನು ಉಜ್ವಲ ರಂಗಿನ ದುಸ್ತು ಧರಿಸಿ, ಬಲಿಷ್ಠವಾದ ಕುದುರೆಯ ಮೇಲೇರಿ ಮೆರೆವಣಿಗೆಯ ಮುಂಭಾಗದಲ್ಲಿ, "ದೂರ ಹೋಗಿರಿ! ದಾರಿ! ದಾರಿ!...ದೂರ! ದೂರ!" ಎಂದು ಗಟ್ಟಿಯಾಗಿ ಕೂಗುತ್ತಾ ಹೋದನು. ವಸಂತನ ಮರಣ ಶಿಕ್ಷೆಯನ್ನು ನೋಡಿ, ನಗರದ ಪ್ರಜೆಗಳು ಭಯ ಭ್ರಾಂತಿಗೊಳಗಾಗುವರೋ ಇಲ್ಲವೋ, ತನ್ನ ದೊಡ್ಡತನವನ್ನು ನೋಡಿ ಎಲ್ಲರೂ ಹೊಸ ರಾಜನ ಬಲಗೈ ಬಂಟನೆಂದು ಮೆಚ್ಚಿಕೊಳ್ಳಬೇಕೆಂದು ಕೋತ್ವಾಲನ ಇಂಗಿತ.

ಆದರೆ ಆಗಲೇ ಥಕ್ಕನೆ ಹೊಗೆಯಂತಹ ಮಂಜು ಬೀಳಲಾರಂಭಿಸಿ, ಪ್ರಜೆಗಳು ಸ್ಪಷ್ಟವಾಗಿ ಕೋತ್ವಾಲ ದೊರೆಯನ್ನು ನೋಡಲಾಗದೆ ಹೋದರು. ಆದರಿಂದ ಅವನಿಗೆ ಸ್ವಲ್ಪ ಆಶಾಭಂಗವಾಯಿತು.

ಕೋತ್ವಾಲನು ಏರಿದ ಕುದುರೆಯ ಹಿಂದೆಯೇ, ಕೈಗಳನ್ನು ಕಟ್ಟಲ್ಪಟ್ಟ ವಸಂತನೂ, ಅವನ ಎರಡು ಬದಿಗಳಲ್ಲಿ ಬಿಚ್ಚುಗತ್ತಿಯ ಭಟರೂ ನಡೆಯುತ್ತಿದ್ದರು. ಅವರ ಹಿಂದೆ ಆಯುಧಧಾರಿಗಳಾದ ಮತ್ತೆ ಕೆಲವು ಭಟರು ಸಾಗುತ್ತಿದ್ದರು. ವಸಂತನು ಯಾವ ಚಲನೆಯನ್ನೂ ತೋರಿಸದೆ ಮೌನವಾಗಿ ನಡೆಯುತ್ತಿದ್ದನು.



Scanned by CamScanner

ಅವರಿಗೆ ಅಡ್ಡಿ ಮಾಡುವವರಾರೂ ಇರಲಿಲ್ಲ. ಪ್ರಜೆಗಳ ದೃಷ್ಟಿಯನ್ನು ತನ್ನ ಕಡೆಗೆ ಆಕರ್ಷಿಸಲಿಕ್ಕಾಗಿ ಕೋತ್ವಾಲನು ಆಗಾಗ, "ದೂರ ಹೋಗಿ" ಎಂದು ಕೂಗುವುದನ್ನು ಬಿಡಲಿಲ್ಲ.

ಆಕಸ್ಮಾತ್ತಾಗಿ ಕೋತ್ವಾಲನನ್ನು ಯಾವನೋ ಕುದುರೆಯ ಮೇಲಿನಿಂದ ದೂಡಿಬಿಟ್ಟನು. ಯಾವನೋ ತನ್ನ ತೀರ ಹತ್ತಿರ ಬಂದಂತೆ ಭಾಸವಾಗಿ ಅವನು ನೋಡುವುದರೊಳಗೇ ಕುದುರೆಯ ಮೇಲಿಂದ ಬಿದ್ದಾಗಿತ್ತು. ರಕೀಪಿನಲ್ಲಿದ್ದ ಅವನ ಕಾಲುಗಳು ಕೆಳಗೆ ಮೇಲಾದುದರಿಂದ ಕುದುರೆಯೂ ಒಂದ ಕಡೆಗೆ ವಾಲಿಕೊಂಡಿತು.

ಉತ್ತರ ಕ್ಷಣದಲ್ಲಿ ಯಾವನೋ ಮಿಂಚಿನಂತಹ ಖಡ್ಗ ಚಾಲನೆಯಿಂದ ಖಣಂಖಣಾಲ್ಲೆಂದು ವಸಂತನ ಬಂಧನದ ಹಿಂಗೈಗಟ್ಟಿನ ಸಂಕಲೆಯನ್ನು ಕಡಿದು ಹಾಕಿದ ಶಬ್ದವೂ ಕೋತ್ವಾಲ ನಾಯಕನ ಕಿವಿಗೆ ಬಿದ್ದಿತು. ಆದರೆ ಅವನಿಂದ ಏನೂ ಮಾಡಲಾಗದೆ ಚಡಪಡಿಸಿದನು.

ವಸಂತನು ಹಿಂದಿರುಗಿ ನೋಡಿದಾಗ ಮುಸುಗಿನ ವೀರನೊಬ್ಬನು, "ಕುದುರೆ ಮೇಲೆ ನನ್ನ ಹಿಂದೆ ಕುಳಿತುಕೊ" ಎಂದು ಹೇಳುತ್ತಾ, ತಾನು ಕುದುರೆಯ ಮೇಲೇರಿ ಕಡಿವಾಣ ಹಿಡಿದುಕೊಂಡನು. ಅಷ್ಟರೊಳಗೆ ವಸಂತನೂ ಗಾಯಗಳಿಂದ ಸಂಕಟಗೊಂಡಿದ್ದರೂ ಏನೋ ಹೊಸ ಉತ್ಸಾಹದ ಉಮೇದು ಬಂದು ಕುದುರೆಯ ಮೇಲೆ ಹಾರಿ ಮರ್ಮವೀರನ ಪಕ್ಕದಲ್ಲಿ ಕುಳಿತನು.

ಮರ್ಮವೀರನು ಕುದುರೆಯನ್ನು ಶರವೇಗದಿಂದ ದೌಡಾಯಿಸಿಕೊಂಡು ಹೊರಟುಹೋದನು.

ಭಟರು ಭಯಾಶ್ಚರ್ಯಗಳಿಂದ ಮಾತಾಡಲು ದಮ್ಮಿಲ್ಲದವರಾಗಿ, ನಿಂತ ಕಂಬಗಳಂತಾದರು. ಕೋತ್ವಾಲನ ನರಳಿಕೆಯ ಆರ್ತ ಸ್ವರ ಕೇಳಿ, ಆ ಭಟರಿಗೆ ಬೋಧ ಬಂದು ಅವನ ಬಳಿಗೆ ಓಡಿದರು. ಅವನನ್ನು ಮೆಲ್ಲನೆ ಎಬ್ಬಿಸಿ ಕುಳ್ಳಿರಿಸಿದರು. ಅವನ ಕುದುರೆಯೂ ಹೆದರಿ ಎದ್ದು ಒಂದಷ್ಟು ದೂರ ಓಡಿಹೋಯಿತು.



Scanned by CamScanner



ಮುಸುಗಿನ ವೀರನು ವಾಯುವೇಗದಿಂದ ಅರಣ್ಯದ ಮಧ್ಯಕ್ಕೆ ಹೋಗಿ, ದೊಡ್ಡದೊಂದು ಗುಹೆಯ ಮುಖದ್ವಾರದ ಮುಂದೆ ನಿಂತು, "ಇಲ್ಲಿ ಇಳಿ" ಎಂದು ಕುದುರೆಯಿಂದಿಳಿದನು. ವಸಂತನೂ ಬೇಗನೆ ಕೆಳಗೆ ಇಳಿದನು.

"ಆಪತ್ತಿನ ಸಮಯದಲ್ಲಿ ನನ್ನನ್ನು ಕಾಪಾಡಿದ್ದೀರಿ. ಆಗ ನೀವು ಬಾರದೆ ಹೋಗಿದ್ದರೆ ಇಷ್ಟು ಹೊತ್ತಿಗೆ ನನ್ನ ಪ್ರಾಣ ಹೋಗುತ್ತಿತ್ತು!" ಎಂದನು ವಸಂತ. ಕೃತಜ್ಞತಾ ಭಾವದಲ್ಲಿ ಈಗತಾನೇ ಅವನು ಮುಸುಗು ವೀರನ ಮುಂದೆ ಕೈ ಮುಗಿದು ನಿಂತನು. "ನೀವು, ನೀವು..." ಎಂದು ಅವನು ಏನೋ ಹೇಳಲಿರುವಾಗ, "ಅದಿರಲಿ ಬಿಡು. ನೀನು ಮಾಡಿದ ಅಪರಾಧವೇನು? ನಿನಗೆ ಮರಣಶಿಕ್ಷೆ ವಿಧಿಸಿದ್ದೇಕೆ?" ಎಂದು ಕೇಳಿದನು ಮುಸುಗುವೀರ.

"ಶಾಂತಿದೇವ ಮಹಾರಾಜರು ಎಲ್ಲಿದ್ದಾರೆ? ಇದ್ದಕ್ಕಿದ್ದ ಹಾಗೆ ರಾತಾರಾತ್ರಿಯಲ್ಲಿ ಸೇನಾಧಿಪತಿ ಹೇಗೆ ಮಹಾರಾಜರಾದರು? ಎಂದು ಭಟರ ಹತ್ತಿರ ಕೇಳಿದೆನು, ಅಷ್ಟೇ. ನನ್ನ ಪ್ರಶ್ನೆಗೆ ಉತ್ತರವೇನೂ ಕೊಡದೆ, ಭಟರು ನನ್ನನ್ನು ಬಂಧಿಸಿದರು. ಆಮೇಲೆ ರಾತ್ರಿಯಲ್ಲಿ ಯಾರೋ ಅಜ್ಞಾತ ವ್ಯಕ್ತಿಗಳು ಮೂವರು ಭಟರನ್ನು ಹತ್ಯ ಮಾಡಿದರಂತೆ, ನನಗೂ ಆ ಹತ್ಯೆಗಳಿಗೂ ಸಂಬಂಧವಿರಬೇಕೆಂದು, ವೀರಸಿಂಹನ ಅಧಿಕಾರವನ್ನು ಮುರಿದು ಹಾಕಲಿಕ್ಕೆ ಪ್ರಾರಂಭಿಸಿದವರೊಂದಿಗೆ ನನಗೆ ಸಂಬಂಧವಿರಬೇಕೆಂದು ನನ್ನ ಮೇಲೆ ನಿಂದಾರೋಪಣೆ ಮಾಡಿ, ಮರಣದಂಡನೆ ಕೊಟ್ಟರು. ಸಾಯುವ ಹೊತ್ತಿನಲ್ಲಿ ದೇವರಂತೆ ನೀವು ಬಂದು..." ಎಂದನು ವಸಂತ.

"ಅದುಸರಿ. ಶಾಂತಿದೇವ ರಾಜರಿಗೆ ಏನಾದರೆ ನಿನಗೇನು? ಅವರ ಮೇಲೆ ನಿನಗೇಕೆ ಇಷ್ಟು ಅಭಿಮಾನ? ಅವರು ಏನಾಗಬೇಕು ನಿನಗೆ?" ಎಂದು ಕೇಳಿದನು ಮುಸುಗುವೀರ.

"ಯಾರು ನನ್ನನ್ನು ಕುದುರೆಯ ಮೇಲಿನಿಂದ ದೂಡಿದ್ದು? ಹೇಗೆ ಬಿಟ್ಟಿರಿ ಅವನನ್ನು? ಎಲ್ಲಿ ಹೋಯಿತು ನನ್ನ ಕುದುರೆ? ಬೇಗ ಕುದುರೆಯನ್ನು ತನ್ನಿರಿ" ಎಂದು ಕೋತ್ವಾಲನು ನೊಂದ ದನಿಯಲ್ಲಿ ಕೇಳಿದನು.

"ಕುದುರೆ ಎತ್ತೋ ಓಡಿಹೋಯಿತು!" ಎಂದರು ಭಟರು.

"ಓಡಿಹೋಯಿತೋ? ಅಯ್ಯಬ್ಬಾ!..." ಎಂದು ನರಳಿದನು ಕೋತ್ವಾಲ.

"ಮರಣ ಶಿಕ್ಷೆಯ ಖೈದಿ ಕೂಡಾ ತಪ್ಪಿಹೋದ!" ಎಂದರು ಭಟರು.

"ಖೈದಿಯೂ ತಪ್ಪಿಸಿಕೊಂಡನೇ? ನನ್ನ ಕೆಲಸವೂ ಮುಗಿದ ಹಾಗೇ ಆಯಿತು. ಇನ್ನು ನನ್ನ ಗತಿ... ಅಯ್ಯಬ್ಬಾ! ಕಾಲು! ಸೊಂಟ! ಹ್ಹಾ...!" ಎಂದು ಎದ್ದು ನಿಲ್ಲಲಾಗದೆ ನಡುಗಿ ಅಲ್ಲಲ್ಲಿ ಬೀಳತೊಡಗಿದನು ಕೋತ್ವಾಲ.



Scanned by CamScanner

"ಶಾಂತಿದೇವ ಮಹಾರಾಜರು ನಮ್ಮಂಥ ಪ್ರಜೆಗಳನ್ನು ಹೆತ್ತ ಮಕ್ಕಳ ಹಾಗೆ ಕಾಪಾಡುವ ದಯಾಮಯರು. ಅಂತಹ ಧರ್ಮಪ್ರಭುಗಳಿಗೆ ಏನಾಯಿತೆಂದು ತಿಳಿಯಬೇಕಾದುದು ನಮ್ಮ ಕರ್ತವ್ಯವಲ್ಲವೆ ? ನನಗೆ ತಿಳಿದಂತೆ ಎಲ್ಲರಿಗೂ ಹಾಗೆಯೇ ಇದೆ. ಬಾಯಿ ಬಿಡಲು ಭಯ ! ಆ ಸೇನಾಧಿಪತಿ ಪರಮ ದುಷ್ಟನೆಂದು ಈಗ ಗೊತ್ತಾಗಿಬಿಟ್ಟಿದೆ. ಅಧಿಕಾರಕ್ಕೆ ಬಂದ ಕ್ಷಣದಿಂದಲೂ ಮಿತಿಮೀರಿದ ಗರ್ವದಿಂದ ಪ್ರಜೆಗಳನ್ನು ಹಿಂಸಿಸುತ್ತಿದ್ದಾನೆ !" ಎಂದು ತನಗೆ ತಿಳಿದ ಸಂಗತಿಯನ್ನು ಹೇಳಿದನು ವಸಂತ.

"ಹೌದು, ನಿಜವೇ. ನಾವು ಆ ದುರಾತ್ಮನ ಅಂತ್ಯವನ್ನು ನೋಡಲೇಬೇಕು. ಆದರೆ ಒಬ್ಬಂಟಿಗನಾಗಿ ಅಲ್ಲ. ಕಸಬರಿಕೆಯ ಕಟ್ಟಿನಂತೆ ಜನರೆಲ್ಲಾ ಒಂದಾಗಿ ಸೇರಿ ಬಲವಾದ ಕಟ್ಟಿನಲ್ಲಿ ಆ ಕಾರ್ಯ ಸಾಧಿಸಬೇಕು. ಅವನಿಗೆ ವ್ಯತಿರೇಕರಾಗಿರುವವರೆಲ್ಲರನ್ನೂ ನಮ್ಮೊಂದಿಗೆ ಸೇರಿಸಿಕೊಳ್ಳಬೇಕು" ಎಂದು ಮುಸುಗು ವೀರನು ಗಂಭೀರವಾಗಿ ಹೇಳಿದನು.

"ನಿನ್ನೆ ರಾತ್ರಿ ಮೂವರು ಭಟರನ್ನು ಕೊಂದದ್ದು ನೀವೇನಾ ?" ಎಂದು ವಸಂತನು ಕೇಳಿದನು.

"ಹೌದು. ಆದರೆ ಅವರನ್ನು ಕೊಲ್ಲಬೇಕೆಂಬ ಉದ್ದೇಶ ನನಗಿಲ್ಲ. ಅವರು ನಿಷ್ಕರುಣೆಯಿಂದ ವೃದ್ಧ ಮಂತ್ರಿಯನ್ನು ಕೊಲ್ಲಲು ನೋಡಿದರು. ಆ ಕ್ಷಣದಲ್ಲಿ ಅವರನ್ನು ಕಾಪಾಡಬೇಕಾದರೆ ಆ ಹಂತಕರನ್ನು ಕೊಲ್ಲುವುದರ ಹೊರತು ಬೇರೆ ದಾರಿ ಇರಲಿಲ್ಲ. ಅಂತಲೇ ಹಾಗಾಗಿಬಿಟ್ಟಿತು. ಅಧಿಕಾರಿಗಳ ಅಪ್ಪಣೆಯಂತೆ ನಡೆದುಕೊಳ್ಳುವ ಪಾಪದವರನ್ನು ಕೊಲ್ಲಬೇಕಾಗಿ ಬಂದರೆ ನನಗೆ ಕಷ್ಟವೇ ಆಗುತ್ತದೆ. ಈ ದಿನ ಯಾರ ಪ್ರಾಣವನ್ನೂ ತೆಗೆಯದೆಯೇ ನಿನ್ನನ್ನು ಕಾಪಾಡುವಂತಾದ್ದಕ್ಕೆ ನನಗೆ ಬಹಳ ತೃಪ್ತಿಯಾಗಿದೆ. ಹೇಡಿಗಳಾದವರೇ ಪಾಪದವರ ಮೇಲೆ ಕತ್ತಿ ಎತ್ತುತ್ತಾರೆ. ನಾವು ಮಹೋನ್ನತವಾದ ಕಾರ್ಯಸಾಧನೆಗೆ ದೀಕ್ಷೆ ಪಡೆದವರು. ಅದಕ್ಕೆ ಧೈರ್ಯದಿಂದ ಧರ್ಮದ ಆಧಾರದಲ್ಲಿ ಹೋರಾಡಬೇಕು" ಎಂದು ಹೇಳಿ ಮುಸುಗುವೀರನು ಗುಹೆಯೊಳಗೆ ಹೋಗಿ, ಕೆಲವು ಮಧುರ ಫಲಗಳನ್ನು ತಂದು ವಸಂತನಿಗೆ ಕೊಟ್ಟನು.

ಆಮೇಲೆ ಅವನು ಅರಣ್ಯದಿಂದ ಅಮೃತಪುರಕ್ಕೆ ಹೋಗುವ ಹತ್ತಿರದ ಒಳದಾರಿಯ ಗುರುತನ್ನು ವಸಂತನಿಗೆ ಹೇಳಿ, "ನೀನು ಅಮೃತಪುರಕ್ಕೆ ಹೋಗಿ, ನಗರದ ಪಡುಗಡೆಯಲ್ಲಿರುವ ಮಹಾಕಾಳೀ ದೇವಿಯ ಆಲಯವನ್ನು ಸೇರಿಕೋ ನನ್ನನ್ನು ಮತ್ತೆ ಅಲ್ಲಿಯೇ ನೋಡುವಿಯಂತೆ. ಜಯವಾಗಲಿ !" ಎಂದು ಹೇಳಿ, ತನ್ನ ಕುದುರೆಯ ಮೇಲೇರಿ, ಅದೆಲ್ಲಿಗೋ ಹೊರಟು ಮಾಯವಾದನು. —(ಇನ್ನೂ ಇದೆ)



Scanned by CamScanner




# ೭

[ ಒಳತಂತ್ರ ಮಾಡಿ ಸುಮೇಧ ರಾಜ್ಯ ಸಿಂಹಾಸನವನ್ನು ಆಕ್ರಮಿಸಿಕೊಂಡ ಸೇನಾಧಿಪತಿ ವೀರಸಿಂಹನ ದುಷ್ಟತನವು ಮಿತಿಮೀರಿಹೋಯಿತು. ತನ್ನ ಅಧಿಕಾರವನ್ನು ಒಪ್ಪದಿದ್ದ ವೃದ್ಧ ಮಂತ್ರಿಯನ್ನೂ, ತನ್ನ ಭಟರಿಗೆ ಇದಿರು ತಿರುಗಿದ ವಸಂತನೆಂಬ ಯುವಕನನ್ನೂ ಕೊಂದುಹಾಕಲು ಅಪ್ಪಣೆ ಮಾಡಿದನು ವೀರಸಿಂಹ. ಆದರೆ ಸಮಯಕ್ಕೆ ಮುಸುಗು ವೀರನೊಬ್ಬನು ಬಂದು ಆ ಇಬ್ಬರನ್ನೂ ಕಾಪಾಡಿಬಿಟ್ಟನು. —ಅನಂತರ ]

ವೃದ್ಧ ಮಂತ್ರಿಯನ್ನೂ, ವಸಂತನನ್ನೂ ಗುರುತು ತಿಳಿಯದ ಯಾವನೋ ಕಾಪಾಡಿ ತಪ್ಪಿಸಿಬಿಟ್ಟನೆಂದು ಗೊತ್ತಾದ ಕೂಡಲೇ ವೀರಸಿಂಹನು ಆಗ್ರಹಾವೇಶದಿಂದ ಹಲ್ಲು ಕಡಿಯುತ್ತ, ಗಡಗಡ ನಡುಗಿದನು.

ಅದನ್ನು ನೋಡಿ ಸುದ್ದಿ ತಂದ ಕೋತ್ವಾಲನ ಕೈಬಂಟನು ಕೈಕಟ್ಟಿಕೊಂಡು ಬಾಗಿ ಬಾಗಿ ನಾಯಿಯ ಹಾಗೆ ವಿಧೇಯತೆ ತೋರಿಸುತ್ತ, "ಮಹಾಪ್ರಭೂ, ತಮ್ಮ ಮುಂದೆ ಬಂದು ಮುಖ ತೋರಿಸಲಿಕ್ಕೆ ಕೋತ್ವಾಲ ಸಾಹೇಬರು ನಾಚಿಕೊಳ್ಳುತ್ತಾರೆ" ಎಂದನು ಮುಂದೆ ಅಡಿಯಿಡುತ್ತ.

ಆ ಕೋತ್ವಾಲ ನಾಯಕನು ಸೇನಾಧಿಪತಿ ವೀರಸಿಂಹನ ಸಹಾಯಕನಾಗಿ, ಶಾಂತಿದೇವ ರಾಜನಿಗೆ ವಿಶ್ವಾಸಘಾತ ಮಾಡಿದವನು. ವೀರಸಿಂಹನು ಸಿಂಹಾಸನವನ್ನು ವಶಪಡಿಸಿಕೊಳ್ಳಲು ಅವನ ಸಹಕಾರ ಬಹು ಮುಖ್ಯವಾಗಿತ್ತು. ಆದ್ದರಿಂದ ಈಗ ವೀರಸಿಂಹನು ತನ್ನನ್ನು ಕ್ಷಮಿಸಿ ಕರೆಯುವನೇನೋ ಎಂಬ ಆಶೆಯಲ್ಲಿ ತನ್ನ ಕೈ ಬಂಟನನ್ನು ಸುದ್ದಿ ಹೇಳುವ ದೂತನಾಗಿ ಕಳುಹಿಸಿದ್ದನು.

ಆದರೆ ವೀರಸಿಂಹನು, ಆ ಕೈಯಾಳಿನ ಮಾತು ಕೇಳಿ ಮತ್ತಷ್ಟು ಉರಿದು ಬೀಳುತ್ತ, ಕಾಲಪ್ಪಳಿಸಿ,



Scanned by CamScanner




"ಛಕ್! ಆ ಕೈಲಾಗದ ಮೂರ್ಖನ ಮುಖ ನೋಡಬೇಕೇ ನಾನು? ಈ ಕ್ಷಣದಲ್ಲೇ ಅವನು ರಾಜ್ಯ ಬಿಟ್ಟು ಹೋಗಿಬಿಡಲಿ! ಈ ಕ್ಷಣದಿಂದ ನೀನೇ ಕೋತ್ವಾಲ ಕಚೇರಿಗೆ ನಾಯಕ. ನನ್ನಂಥವನ ಮುಂದೆ ಬಂದು ಈ ಹಾಳು ಸುದ್ದಿ ಹೇಳಿದ ನಿನ್ನ ಧೈರ್ಯಕ್ಕೂ, ರಾಜವಿಶ್ವಾಸದ ವಿಧೇಯತೆಗೂ ಮೆಚ್ಚಿದ್ದೇನೆ. ಆ ಹೆಬಗನು ಇನ್ನು ನನ್ನ ಕಣ್ಣಿಗೆ ಬಿದ್ದರೆ ಜೋಕೆ!" ಎಂದು ಆಗಲೇ ಅಧಿಕಾರ ಬಿಲ್ಲೆಯನ್ನು ತರಿಸಿ ಅವನ ಎದೆಗೆ ಕಟ್ಟಿದನು.

ಕೋತ್ವಾಲ ಬಂಟನಿಗೆ ತಲೆ ಕಾಲು ತಿಳಿಯದಷ್ಟು ಸಂತೋಷವಾಯಿತು. ಅವನು ವೀರಸಿಂಹನ ಕಾಲಿಗೆ ಸಾಷ್ಟಾಂಗಬಿದ್ದು, "ಮಹಾಪ್ರಭೂ! ನಾನು ನಿಮಗಾಗಿ ನನ್ನ ಪ್ರಾಣ ಕೊಡಲಿಕ್ಕೂ ತಯಾರಿದ್ದೇನೆ!" ಎಂದನು.

"ಮೂರ್ಖಾ, ಅದೇ ಬೇಡವೆನ್ನುತ್ತೇನೆ. ವಿಧೇಯತೆಯಿಂದ ವಿವೇಕವನ್ನು ಕೊಂದುಕೊಳ್ಳಬೇಡ. ನಿನ್ನ ಪ್ರಾಣ ನನಗೇಕೆ? ನೀನು ಸತ್ತರೆ ಇನ್ನೊಬ್ಬನನ್ನು ನಿಯಮಿಸಿಕೊಳ್ಳಲಾರೆನೇ? ತನ್ನ ಪ್ರಾಣ ರಕ್ಷಿಸಿಕೊಂಡು ಸ್ವಾಮಿಕಾರ್ಯ ಸಾಧಿಸುವವನೇ ಬುದ್ಧಿವಂತ. ಹಾಗೆ ಬದುಕಲು ಕಲಿ. ಹಾಗೆ ನನ್ನನ್ನು ಮೆಚ್ಚಿಸು" ಎಂದನು ವೀರಸಿಂಹ ಅವನ ಹೆಗಲು ಬೆನ್ನು ತಟ್ಟುತ್ತ.

ಅವನು ಎದ್ದು ನಿಂತು, "ಪ್ರಭುಗಳು ನನ್ನ ಕಣ್ಣು ತೆರೆಸಿದಿರಿ. ಇನ್ನೆಂದಿಗೂ ನಾನು ಪ್ರಾಣ ಬಿಡುವ ಮಾತು ಹೇಳಲಾರೆ. ತಮ್ಮ ಶತ್ರುಗಳ ಪ್ರಾಣಗಳನ್ನೇ ತೆಗೆಯುತ್ತೇನೆ. ಆಜ್ಞೆಯಾಗಲಿ!" ಎಂದನು ಎದೆ ಸೆಟೆಯುತ್ತ.

"ಸರಿ ಹೋಗು. ನಮಗೆ ಬೇಕಾದ್ದು ಬುದ್ಧಿಯ ಮಾತುಗಳಲ್ಲ. ಕೃತಿಯ ಪ್ರದರ್ಶನವೇ. ಅದು ಹೇಗೆ ಏನೆಂಬುದನ್ನು ನೀನೇ ನೋಡಿಕೋ! ನನ್ನ ಅನುಜ್ಞೆಗಾಗಿ ಕಾಯಬೇಡ!" ಎಂದನು ವೀರಸಿಂಹ.

ಹೊಸ ಕೋತ್ವಾಲ ನಾಯಕನು ವೀರಸಿಂಹನಿಗೆ ಕೈಯೆತ್ತಿ ನಮಸ್ಕಾರ ಮಾಡಿ ಅಲ್ಲಿಂದ ಹೊರಟನು. ಇವನು ಹಳೆಯ ಕೋತ್ವಾಲನಿಗಿಂತಲೂ ಪರಮ ಕಾರ್ಕೋಟಕನ ಹಾಗೆ ಪ್ರವರ್ತಿಸಲು ತೊಡಗಿದನು.

ತನಗೆ ಕೋತ್ವಾಲ ನಾಯಕನ ಪದವಿ ಕರುಣಿಸಿದ ವೀರಸಿಂಹನನ್ನು ಸಂತೋಷಪಡಿಸಬೇಕೆಂಬ ತಪನದಲ್ಲಿ, ಹತ್ತು ಮಂದಿ ಭಟರನ್ನು ತನ್ನೊಂದಿಗೆ ಕರೆದುಕೊಂಡು ಶಾಂತಿಪುರ ನಗರದ ಹೊರಗಿನ ಮೇರೆಯಲ್ಲಿದ್ದ ವಸಂತನ ಗ್ರಾಮಕ್ಕೆ ಹೋದನು.

ವೃದ್ಧರಾದ ವಸಂತನ ತಾಯಿ ತಂದೆಯರನ್ನೂ, ತಮ್ಮ ತಂಗಿಯರನ್ನೂ ಗ್ರಾಮದ ನಡುವಿನಲ್ಲಿದ್ದ ಸಂತೆಕಟ್ಟೆಗೆ ದರದರನೆ ಎಳೆಯಿಸಿಕೊಂಡು ಹೋಗಿ, ನಿಲ್ಲಿಸಿ, ಅವರ ಎದೆಗಳಿಗೆ ನೇರಾಗಿ ಈಟಿಗಳನ್ನು ತೋರಿಸುತ್ತ, "ಹೇಳಿರಿ. ವಸಂತನನ್ನು ಎಲ್ಲಿ ಅಡಗಿಸಿಟ್ಟಿದ್ದೀರಿ? ಹೇಳದಿದ್ದರೆ ಸಾಯುವಿರಿ!" ಎಂದನು ಕ್ರೂರತನದಿಂದ.



Scanned by CamScanner

"ನಾವೇನು ಕಂಡೆವು ಅಯ್ಯಾ? ವಸಂತನನ್ನು ರಾಜಭಟರು ಎಳೆದುಕೊಂಡು ಹೋದರು! ಮತ್ತೆ ಬಂದು ನಮ್ಮನ್ನು ಕೇಳಿದರೆ ನಾವೇನು ಹೇಳೇವು ಅಯ್ಯಾ?" ಎನ್ನುತ್ತಾ, ವಸಂತನ ತಂದೆ ದೀನತೆ ಯಿಂದ ಕೈ ಜೋಡಿಸಿದನು.

"ಅದು ನಮಗೂ ಗೊತ್ತಿದೆ. ಅವನನ್ನು ತಪ್ಪಿಸಿ ಒಯ್ದು ಎಲ್ಲೋ ಅಡಗಿಸಿಟ್ಟಿದ್ದೀರಿ. ಈಗ ವಸಂತ ಎಲ್ಲಿದ್ದಾನೆ? ಹಳೇ ಕೋತ್ವಾಲನನ್ನು ಕುದುರೆಯಿಂದ ದೂಡಿ ಭಟರ ಕೈಯಿಂದ ವಸಂತನನ್ನು ಅಪಹರಿಸಿ ಕೊಂಡು ಹೋದ ಆ ದುಷ್ಟನು ಯಾರು? ನಿಜ ಹೇಳು" ಎಂದು ಗದರಿಸಿ ಕೇಳಿದನು ಹೊಸ ಕೋತ್ವಾಲ.

ಆಗ ವಸಂತನ ತಮ್ಮನು ಮುಂದೆ ಬಂದು, "ನಮ್ಮ ಅಣ್ಣನನ್ನು ಯಾವನೋ ಮುಸುಗಿನವನು ಕಾಪಾಡಿಕೊಂಡು ಹೋದಾಗ ನಾವು ಅಲ್ಲಿರಲಿಲ್ಲ. ನೀವು ಅಲ್ಲೇ ಇದ್ದಿರೆಂದು ನೋಡಿದವರು ಹೇಳಿದರು. ಅಣ್ಣ ಎಲ್ಲಿದ್ದಾನೆಂಬುದು ನಿಮಗೇ ಗೊತ್ತಾಗಬೇಕ ಲ್ಲದೆ ನಮಗೆ ಅಲ್ಲ" ಎಂದನು.

"ಹೌದು, ಅವನ ಮೆರವಣಿಗೆ ಹೋಗುವಾಗ ನೀವು ಕುದುರೆಯ ಹಿಂದೆಯೇ ನಡೆಯುತ್ತ ನೋಡು ತ್ತಿದ್ದಿರಿ. ಮುಸುಗಿನ ವೀರನು ಬಂದಾಗ ಕೂಡಾ ನೀವು ಅಲ್ಲೇ ಇದ್ದದ್ದನ್ನು ನೋಡಿದ್ದೇನೆ" ಎಂದು ಅಲ್ಲಿ ಸೇರಿದ ಗುಂಪಿನಿಂದ ಯುವಕನೊಬ್ಬನು ಮುಂದೆ ಬಂದು ಹೇಳಿದನು.

"ಬಾಯಿ ಮುಚ್ಚು ಪುಂಡ ಪೋರಾ! ನಾನು ಅಲ್ಲಿ ಇದ್ದಿದ್ದರೆ ನಿಮ್ಮಲ್ಲಿ ಒಬ್ಬರು ಕೂಡಾ ಜೀವ ದೊಂದಿಗೆ ಇರುತ್ತಿದ್ದಿರಾ? ಸುಳ್ಳು ಬೊಗಳುವಷ್ಟು ಧೈರ್ಯವೇ ನಿನಗೆ?" ಎಂದು ಆ ಯುವಕನನ್ನು ಕೊರಡೆಯಿಂದ ಹೊಡೆಯಲು ತೊಡಗಿದನು.

"ಏನಯ್ಯಾ ಇದು? ಏನೂ ಅರಿಯದ ಹುಡುಗ ನನ್ನು ಸುಮ್ಮಸುಮ್ಮನೆ ಹಾಗೇಕೆ ಹೊಡೆಯು




ವಿರಿ?" ಎಂದು ಮತ್ತೊಬ್ಬ ಗ್ರಾಮಸ್ಥನು ಕೇಳಿದನು. ಅವನನ್ನನುಸರಿಸಿ, "ಇದೆಂಥ ರಾಜ ದರ್ಬಾರೋ ಏನೋ! ಶಾಂತಿದೇವ ಮಹಾರಾಜರ ಕಾಲದಲ್ಲಿ ಇಂತಹ ಘೋರ ನಡೆದದ್ದೇ ಇಲ್ಲ!" ಎಂದನು ಮತ್ತೊಬ್ಬ ದೊಡ್ಡ ಮನುಷ್ಯ.

"ಓಹೋ! ಇದು ಬಂಡಾಯವೆಬ್ಬಿಸುವವರ ಗ್ರಾಮವೆಂದು ಈಗ ತಿಳಿಯಿತು" ಎಂದು ಹೊಸ ಕೋತ್ವಾಲನು ಭಟರ ಕಡೆಗೆ ತಿರುಗಿ, "ಹೋಗಿ ಈಗಲೇ ಈ ಗ್ರಾಮವನ್ನು ಸುಟ್ಟು ಹಾಕಿರಿ! ಒಮ್ಮೆಗೇ ನಾಲ್ಕು ದಿಕ್ಕುಗಳಿಂದ ಬೆಂಕಿ ಹಚ್ಚಿರಿ. ಎಲ್ಲವೂ ಭಸ್ಮವಾಗಿ ಹೋಗಬೇಕು. ರಾಜಭಯ ವಿಲ್ಲದೆ ಸೊಕ್ಕಿಹೋದ ಜನರು! ಹುಂ, ಹಚ್ಚಿರಿ ಬೆಂಕಿ!" ಎಂದು ಅಪ್ಪಣೆ ಮಾಡಿದನು.

"ಹಾಗೇನು ಮಾಡಿದೆವಯ್ಯಾ? ಎಲ್ಲಿ ಬಂಡಾಯ ವೆದ್ದಿದ್ದೇವೆ? ಅಯ್ಯಯ್ಯೋ! ಕೇಳುವವರಿಲ್ಲದೆ ಹೋಯಿತೆ?..." ಎಂದು ಗ್ರಾಮಸ್ಥರು ಕೂಗಿ



ಕೊಳ್ಳತೊಡಗಿದರು. ಭಟರು ಅದಾವುದನ್ನೂ ಲಕ್ಷ್ಯ ಮಾಡದೆ ಒಂದು ಮನೆಯೊಳಗೆ ನುಗ್ಗಿ ಉರಿಯುತ್ತಿದ್ದ ಕೊಳ್ಳಿಯನ್ನು ತಂದು ಆ ಮನೆಯ ಮಾಡಿಗೆ ಬೆಂಕಿ ಹಚ್ಚಿದರು. ನೋಡುತ್ತಿದ್ದಂತೆ ಇವರ ಭಟರೂ ಹಾಗೆಯೇ ಮಾಡತೊಡಗಲು, ಊರೆಲ್ಲಾ ಅಲ್ಲಕಲ್ಲೋಲವಾಯಿತು.

ಹೊಸ ಕೋತ್ವಾಲನು ಗರ್ವದ ಆನಂದದಲ್ಲಿ ಮೀಸೆ ತಿರುಗಿಸುತ್ತ, "ಒಂದೇ ಒಂದು ಮನೆ ಕೂಡಾ ಉಳಿಯಬಾರದು. ಎಲ್ಲಾ ಸುಟ್ಟು ಬೂದಿಯಾದರೇನೇ ಇತರರಿಗೂ ಬುದ್ಧಿ ಬರುತ್ತ!" ಎಂದನು.

ಸ್ವಲ್ಪಹೊತ್ತಿಗೆ ಊರು ಪೂರಾ ಧಗಧಗಿಸತೊಡಗಿತು. ಅಗ್ನಿಜ್ವಾಲೆಗಳ ಕಿಡಿಕಾವುಗಳೂ, ಚಟಪಟನೆ ಸಿಡಿಯುವ ಬಿದಿರು ಬೊಂಬುಗಳ ಸಪ್ಪಳಗಳೂ, ಮೊಳಗುವ ಹಾಹಾಕಾರ ಆಕ್ರಂದನಗಳೂ ದಾರುಣವಾದುವು. ಯಾರಾದರೂ ಒಂದು ಕಡೆಯಲ್ಲಿ ಆರಿಸಲು ತೊಡಗಿದರೆ ಮತ್ತೊಂದು ಕಡೆಯಲ್ಲಿ ಬೆಂಕಿಯು ಜ್ವಾಲೆ ಏಳುತ್ತಿದ್ದಿತು. ತನ್ನಿಂದ ಅಷ್ಟೊಂದು ಭೀಕರ ದೃಶ್ಯವೇರ್ಪಡಿಸುವ ಅಧಿಕಾರ ಬಂದುದಕ್ಕೆ ಬಲು ಹೆಮ್ಮೆಯ ವಿಕಟಾಟ್ಟಹಾಸ ಮಾಡುತ್ತ, ಭಟರನ್ನು ಹೊಗಳುತ್ತ ಹುರುಡಿಸುತ್ತಿದ್ದನು ಈ ಹೊಸ ಕೋತ್ವಾಲ! ಅಷ್ಟುಮಾಡಿಗೆದ್ದ ಸಂತೋಷದಲ್ಲಿ ಭಟರನ್ನು ಕರೆದುಕೊಂಡು, ಅವನು ಕುದುರೆಯ ಮೇಲೇರಿ ರಾಜಧಾನಿಗೆ ಹಿಂದಿರುಗಿದನು.

* * *

ಅದೊಂದು ಜಿರಿಜಿರಿ ಮಳೆ ಸುರಿಯುತ್ತಿರುವ ರಾತ್ರಿಯ ವೇಳೆ. ಮೇಘಾವೃತವಾದ ಆಕಾಶವು ಆಗಾಗ ಮಿಂಚುತ್ತಿದ್ದಿತು. ಅರಣ್ಯದಿಂದ ಜಯಪುರಿಗೆ ಹೋಗುವ ದಾರಿಯಲ್ಲಿ ಜಯಾನಂದ ಮುನಿ ಒಬ್ಬನೇ ನಡೆಯುತ್ತಿದ್ದನು. ಅವನ ಹಿಂದೆ ನೆಮ್ಮದಿಯಾಗಿ ಹುಲಿಯೊಂದು ಹಸುವಿನ ಹಾಗೆ ನಡೆಯುತ್ತಿದ್ದಿತು. ಮುನಿಯ ಹೆಗಲಿನ ಮೇಲೆ ಸುಂದರವಾದೊಂದು ಗಿಳಿ ಕುಳಿತ್ತಿದ್ದಿತು.

ಆ ರಾಜ್ಯಕ್ಕೆ ಜಯಪುರಿಯೇ ರಾಜಧಾನಿಯೂ ಆಗಿತ್ತು. ಆದರೆ ಅದು ಶಾಂತಿಪುರದ ಹಾಗೆ ಪಟ್ಟಣವಲ್ಲ. ನೋಡಿದರೆ ದೊಡ್ಡದೊಂದು ಗ್ರಾಮುಗಳ ಊರಿನಂತೆ ಕಾಣುತ್ತದೆ. ಅದನ್ನು ಆಧಾರವಾಗಿ ಮಾಡಿಕೊಂಡು, ಜಯಪುರಿ ರಾಜ್ಯವು ಚಿಕ್ಕದಾದುದರಿಂದ ರಾಜಧಾನಿಯ ಹೆಸರೇ ರಾಜ್ಯಕ್ಕೂ ಬಂದಿತ್ತು. ಆದರೂ ಸ್ವತಂತ್ರವಾದ ರಾಜ್ಯವದು. ಅದರ ಒಂದು ಕಡೆಯಲ್ಲಿ ಸುಮೇಧ ರಾಜ್ಯವೂ ಮತ್ತೊಂದು ಬದಿಯಲ್ಲಿ ಸಮುದ್ರವೂ ಮೇರೆಗಳಾಗಿದ್ದುವು. ಉಳಿದೆರಡು ಕಡೆಗಳಲ್ಲಿ ದೊಡ್ಡ ಅರಣ್ಯಗಳು ವಿಸ್ತರಿಸಿಕೊಂಡಿದ್ದುವು.

ಒಮ್ಮೆ ಸುಮಾರು ಮೂರು ತಲೆಮಾರುಗಳ ಹಿಂದೆ, ಜಯಪುರಿಯ ಸಾಮಂತರಾಜನು ಸುಮೇಧ ರಾಜ್ಯಾಧಿಪತಿಯನ್ನು ಭಯಂಕರವಾದೊಂದು



Scanned by CamScanner

ಪ್ರಾಣಾಪಾಯದಿಂದ ರಕ್ಷಿಸಿದ್ದನು. ಅಂದಿನಿಂದ ಶಾಂತಿಪುರದ ರಾಜರು ಜಯಪುರಿಗೆ ಪೂರ್ಣ ಸ್ವಾತಂತ್ರ್ಯವನ್ನು ಪ್ರಸಾದಿಸಿದರು. ಅಷ್ಟೇ ಅಲ್ಲದೆ ಅದಕ್ಕೆ ರಕ್ಷಣೆಯನ್ನೂ ಕಲ್ಪಿಸಿದ್ದರು. ಏಕೆಂದರೆ ಜಯಪುರಿಯ ಮೇಲೆ ದಾಳಿ ನಡೆಸಬೇಕಾದರೆ, ಶತ್ರುಗಳು ಸುಮೇಧ ರಾಜ್ಯವನ್ನೇ ದಾಟಿಕೊಂಡು ಹೋಗಬೇಕಾಗುತ್ತದೆ.

ಶಂಕರವರ್ಮನು ಜಯಪುರಿಯ ರಾಜನಾಗಿದ್ದನು. ಜಯಾನಂದ ಮುನಿಯ ಮುಖ್ಯ ಶಿಷ್ಯರೊಳಗೆ ಅವನೂ ಒಬ್ಬನು.

ಜಯಾನಂದ ಮುನಿ ನಿರ್ಮಾನುಷ್ಯವಾಗಿದ್ದ ಹಾದಿಯಲ್ಲಿ ನಡೆಯುತ್ತ, ಜಯಪುರಿಯ ಮೇರೆಯಲ್ಲಿದ್ದ ಆಲಯದ ಹತ್ತಿರ ನಿಂತು, "ಹುಲಿರಾಯಾ, ನಾನು ತಿರುಗಿ ಬರುವವರೆಗೆ ಇಲ್ಲಿಯೇ ಇರು" ಎಂದು ಹುಲಿರಾಯನಿಗೆ ಹೇಳಿ, ಗಿಳಿಯನ್ನು ಬಲಗೈಯಲ್ಲೆತ್ತಿ, "ಮಲ್ಲೀ, ನೀನು ಹೋಗಿ ನಾನು ಬರುವ ಸಂಗತಿಯನ್ನು ರಾಜನಿಗೆ ಹೇಳು" ಎಂದನು.

ಗಿಳಿ ಅರ್ಥವಾದಂತೆ ಮುನಿಯ ಗದ್ದ ಮುದ್ದಿಸಿ, ರೆಕ್ಕೆ ಬಿಡಿಸಿ ಕೋಟೆಯ ಕಡೆಗೆ ಹಾರಿಹೋಯಿತು.

ಶಂಕರವರ್ಮ ರಾಜನು ಆ ದಿನ ಸ್ವಲ್ಪ ತಡವಾಗಿಯೇ ಭೋಜನ ಮುಗಿಸಿ, ಶಯನಮಂದಿರಕ್ಕೆ ಹೊರಡುವ ತಯಾರಿಯಲ್ಲಿರುವಾಗ, "ಅಪ್ಪಾ" ಎಂಬ ಕೀಚು ಕೀರವಾಣಿಯ ಗುರುತು ಹಿಡಿದು ತಿರುಗಿ ನಿಂತನು.

ಗಿಳಿ ರಾಜನ ಹೆಗಲಲ್ಲಿ ಎರಗಿ, "ಅಪ್ಪಾ!" ಎಂದು ಮತ್ತೆ ಕರೆಯಿತು.

"ಏನು ಮಲ್ಲೀ, ಏನು ವಿಶೇಷ ಸುದ್ದಿ?" ಎಂದು ಕೇಳಿದನು ರಾಜ.

"ಮಹಾತ್ಮಾ, ಮಹಾತ್ಮಾ" ಎಂದು ಮೇಲಕ್ಕೂ ಕೆಳಕ್ಕೂ ಆಚೆಗೂ ಈಚೆಗೂ ತಲೆಯಾಡಿಸಿತು ಗಿಳಿ.

"ಹೌದೇನು?" ಎಂದು ರಾಜನು ಭಟರನ್ನು ಕರೆದು ಕೋಟೆಯ ಬಾಗಿಲನ್ನು ತೆರೆಯುವಂತೆ ಆಜ್ಞೆ ಮಾಡಿದನು. ಜಯಾನಂದ ಮುನಿ ಶಂಕರವರ್ಮ ರಾಜನನ್ನು "ಅಪ್ಪಾ" ಎಂದು ಕರೆಯುವನು. ಶಂಕರ



Scanned by CamScanner



ವರ್ಮನು ಜಯಾನಂದ ಮುನಿಯನ್ನು "ಮಹಾತ್ಮಾ" ಎಂದು ಸಂಬೋಧಿಸುವನು. ಗಿಳಿ ಆ ಎರಡು ಮಾತುಗಳನ್ನು ಹೇಳಿ ತಾನು ಬಂದ ಕೆಲಸ ನೆರವೇರಿಸಿತ್ತು.

ಶಂಕರವರ್ಮನು ಜಯಾನಂದ ಮುನಿಗೆ ಇದಿರಾಗಿ ಹೋಗಿ ನಮಸ್ಕಾರ ಮಾಡಿ, "ನೀವು ಮಳೆಯಲ್ಲಿ ನೆನೆಯುತ್ತ ಇಷ್ಟು ದೂರ ಬರಬೇಕೆ? ಮಲ್ಲಿಯನ್ನು ಕಳುಹಿಸಿದ್ದರೆ ನಾನೇ ನಿಮ್ಮ ಹತ್ತಿರ ಬರುತ್ತಿದ್ದೆನಷ್ಟೆ?" ಎಂದನು.

"ನೀನು ಹೇಳುವುದೇನೋ ನಿಜವೇ ಅಪ್ಪಾ. ನೀನು ನನ್ನ ಆಶ್ರಮಕ್ಕೆ ಬಂದುಬಿಟ್ಟರೆ, ಅದು ಹತ್ತು ಮಂದಿಗಳನ್ನು ಆಕರ್ಷಿಸುತ್ತದಲ್ಲವೆ? ಅದಕ್ಕಾಗಿಯೇ ನಾನೇ ಬಂದೆ. ಮಳೆ ಬಿಸಿಲುಗಳೆಲ್ಲ ನಮಗೆ ಅಭ್ಯಾಸವಾದದ್ದು ತಾನೇ?" ಎಂದನು ಜಯಾನಂದ ಮುನಿ. ಹಾಗಾದರೆ ಏನೋ ತುರ್ತು ರಹಸ್ಯ ವಿಷಯವಿದ್ದುದರಿಂದಲೇ ಇವರು ಇಲ್ಲಿಗೆ ಬಂದರೆಂದು ಶಂಕರವರ್ಮನು ತಿಳಿದುಕೊಂಡನು.

ಮುನಿಯನ್ನು ಗೌರವದಿಂದ ರಾಜಮಂದಿರದೊಳಗೆ ಕರೆದುಕೊಂಡು ಹೋಗಿ, ಬಟ್ಟೆ ಬದಲಾಯಿಸುವಂತೆ ಹೇಳಿ ಶಂಕರವರ್ಮನು ತಾನೇ ಸ್ವತಃ ಬಿಸಿ ಹಾಲನ್ನು ತಂದುಕೊಟ್ಟನು. ಆಮೇಲೆ ಮುನಿಯ ಅನುಮತಿಯಂತೆ ಇದಿರಿನ ಆಸನದಲ್ಲಿ ಕುಳಿತನು.

"ಅಪ್ಪಾ, ಈ ನಡುವೆ ನೀನು ಮನಸ್ಸಿನಲ್ಲಿ ತುಂಬಾ ನೊಂದುಕೊಳ್ಳುತ್ತಿರುವುದಾಗಿ ಕೇಳಿದೆನು. ನಿಜವೇನು?" ಎಂದು ಕೇಳಿದನು ಮುನಿ.

"ನಿಜವೇ ಮಹಾತ್ಮಾ, ನಿಜವೇ. ನಾನೇ ನಿಮ್ಮ ದರ್ಶನಕ್ಕೆ ಬಂದು ನನ್ನ ಸಂಕಟ ಹೇಳಿಕೊಳ್ಳಬೇಕೆಂದಿದ್ದೆನು" ಎಂದನು ಶಂಕರವರ್ಮ.

"ಶಾಂತಿಪುರದಲ್ಲಿ ನಡೆದ ದುರ್ಘಟನೆಗಳು ನಿನಗೆ ಸಂಕಟವನ್ನುಂಟುಮಾಡಿದೆ, ಹೌದಾ?" ಎಂದು ಕೇಳಿದನು ಮುನಿ.

"ಹೌದು. ಅನೇಕ ತಲೆಮಾರುಗಳಿಂದ ಸತ್ಕೀರ್ತಿಯಲ್ಲಿ ಮೆರೆದ ಸುಮೇಧ ರಾಜವಂಶವು ಈಗ ಅಂತರಿಸಿ ಹೋಯಿತು. ಆ ವೀರಸಿಂಹನು ರಾಜವಂಶಕ್ಕೆ ಸೇರಿದವನಾದರೂ ಪರಮ ಕಿರಾತಕನಾಗಿ ಬದಲಾಯಿಸಿದ್ದಾನೆ. ದಿನದಿನಕ್ಕೂ ಅವನ ದುರಾಗತವು ಹೆಚ್ಚಾಗುತ್ತಾ ಇದೆ. ಅವನ ಕುಕ್ಕುದೃಷ್ಟಿ ಹೆಬ್ಬಾವಿನ ಹಾಗೆ ಬೇಗದಲ್ಲಿ ಈ ರಾಜ್ಯದ ಮೇಲೆಯೂ ಬೀಳುವುದೆನ್ನಲು ಸಂದೇಹ ಕಾಣುವುದಿಲ್ಲ" ಎಂದನು ಶಂಕರವರ್ಮ ರಾಜ.

"ಆ ಪುರಾತನ ರಾಜವಂಶವು ಅಂತರಿಸಲಿಲ್ಲ ಅಪ್ಪಾ, ಅಂತರಿಸಲಿಲ್ಲ" ಎಂದು ಹೇಳಿ ಮುನಿ ತನ್ನ ಮುಷ್ಟಿಯನ್ನು ತೆರೆದನು. ಅವನ ಅಂಗೈಯಲ್ಲಿ ಪದಕವಿರುವ ಬಂಗಾರದ ಹಾರವಿರುವುದು ಕಂಡಿತು. ಪದಕದ ಮೇಲೆ ಸುಮೇಧ ರಾಜವಂಶದ ಮುದ್ರೆ ಹೊಳೆಯುತ್ತಿದ್ದಿತು!

ಅದನ್ನು ನೋಡಿದ ಕೂಡಲೇ ಶಂಕರವರ್ಮನ ನೇತ್ರಗಳು ಆನಂದ ಆಶ್ಚರ್ಯಗಳಿಂದ ಹೊಳೆದುವು.



Scanned by CamScanner

“ಇದು ಸುಮೇಧದ ಯುವರಾಜನ ಕಂಠಹಾರ ! ನಿಮ್ಮ ಕೈಗೆ ಹೇಗೆ ಬಂತು ?” ಎಂದು ಕೇಳಿದನು ಶಂಕರವರ್ಮ.

“ಹಾರ ಮಾತ್ರವಲ್ಲ. ಯುವರಾಜನೊಂದಿಗೇ ಈ ಹಾರ ಸಿಕ್ಕಿದೆ ಅಪ್ಪಾ. ಯುವರಾಜನೂ ನನ್ನ ಹತ್ತಿರವೇ ಇದ್ದಾನೆ” ಎಂದನು ಜಯಾನಂದ ಮುನಿ ಮುಗುಳ್ನಗುತ್ತ.

“ಮಹಾತ್ಮಾ ! ಆನಂದದ ವಾರ್ತೆಯನ್ನು ಹೇಳಿದಿರಿ ! ಯುವರಾಜನನ್ನು ಬೆಳೆಯಿಸುವ ಬಾಧ್ಯತೆಯ ಭಾಗ್ಯ ನಾನು ವಹಿಸುತ್ತೇನೆ ಮಹಾತ್ಮಾ. ಅದಕ್ಕಾಗಿ ತಾನೇ ತಮ್ಮ ಆಗಮನ ?” ಎಂದನು ಸಂತೋಷದ ಉತ್ಸಾಹದಲ್ಲಿ ಶಂಕರವರ್ಮ.

“ಅದು ನನಗೆ ಗೊತ್ತಿದೆ ಅಪ್ಪಾ. ಹಾಗೊಂದು ವೇಳೆ ಮಾಡಿದರೆ ನಿನಗಾಗಲೀ, ಯುವರಾಜನಿಗಾಗಲಿ ಕ್ಷೇಮವಾಗುವುದೆನ್ನುವಿಯಾ ?” ಎಂದು ಕೇಳಿದನು ಜಯಾನಂದ ಮುನಿ.

ಶಂಕರವರ್ಮನು ಸ್ವಲ್ಪ ಹೊತ್ತು ಮೌನವಾಗಿದ್ದು “ತೀರಾ ಆಲೋಚನೆ ಮಾಡಿದರೆ ನೀವು ಹೇಳುವಂತೆ ಇಬ್ಬರಿಗೂ ಕ್ಷೇಮವಲ್ಲವೆಂದೇ ಕಾಣುತ್ತದೆ. ಆ ದುಷ್ಟನಾದ ವೀರಸಿಂಹನು ಯುವರಾಜನನ್ನು ಹುಡುಕಿಸಲು ನಾಲ್ಕು ದಿಕ್ಕುಗಳಿಗೂ ಗೂಢಚಾರರನ್ನು ಕಳುಹಿಸಿದ್ದಾನೆಂದು ತಿಳಿಯುತ್ತದೆ. ಹಾಗಿರುವಾಗ ಯುವರಾಜನನ್ನು ರಹಸ್ಯವಾಗಿ ಕಾಪಾಡುವುದು ಕಷ್ಟವೇ ! ನಿಜ ಮಹಾತ್ಮಾ !” ಎಂದು ಹೇಳಿದನು ಚಿಂತೆಯುಲ್ಲಿ.

“ಸತ್ಯವನ್ನೇ ಹೇಳಿರುವಿ. ಯುವರಾಜನು ಅರಣ್ಯ ಮಧ್ಯದಲ್ಲಿ ರಹಸ್ಯವಾಗಿ ಬೆಳೆಯುವುದೇ ಕ್ಷೇಮ. ಆದರೆ ಯುವರಾಜನಿಗೆ ಸೇರುವ ಈ ಹಾರವನ್ನು ಮಾತ್ರ ಬಹು ಜಾಗರೂಕತೆಯಿಂದ ಭದ್ರಪಡಿಸಬೇಕು. ಇದೊಂದು ಮಹತ್ಕಾರ್ಯವನ್ನು ಒಪ್ಪಿಸಲಿಕ್ಕಾಗಿಯೇ ಹೀಗೆ ಬಂದೆನು. ಇದು ಅವನ ಕೊರಳಿನಲ್ಲಿರುವುದು ಕ್ಷೇಮವಲ್ಲ” ಎಂದನು ಜಯಾನಂದ ಮುನಿ.

“ಅಪ್ಪಣೆ ಮಹಾತ್ಮಾ, ಇದಕ್ಕಿಂತ ಹೆಚ್ಚಾಗಿ ನಾನು ಮಾಡಬೇಕಾದ್ದು ಏನಾದರೂ ಇದೆಯೇ ?” ಎಂದು ಕೇಳಿದನು ಶಂಕರವರ್ಮ.

“ಇದೆಯಪ್ಪಾ ಇದೆ. ನಿನ್ನ ಕೆಲಸ ತುಂಬಾ ಇದೆ. ಆದರೆ ಈಗಲೇ ಅಲ್ಲ, ಅದಕ್ಕೆ ತಕ್ಕ ಸಮಯ ಮಾತ್ರ ಬರಬೇಕು. ಯಾವುದಕ್ಕೂ ಕಾಲವು ಕೂಡಿ ಬರಬೇಕಷ್ಟೆ ? ಅದುವರೆಗೂ ಚಿಂತೆ ಬಿಟ್ಟು ನಿರ್ಭೀತಿಯಿಂದ ಸಹನೆಯಿಂದಿರಬೇಕು. ಸುಮೇಧ ರಾಜ್ಯ ಪ್ರಜೆಗಳ ಸಂಕಟಗಳನ್ನೂ, ಕಷ್ಟನಷ್ಟಗಳನ್ನೂ ಹೋಗಲಾಡಿಸಲು ನಾವು ನಮ್ಮ ಕರ್ತವ್ಯಗಳನ್ನು ಎಚ್ಚರಿಕೆಯಲ್ಲಿ ನಿರ್ವಹಿಸಬೇಕು” ಎಂದು ಹೇಳಿದನು ಜಯಾನಂದ ಮುನಿ.

— (ಇನ್ನೂ ಇದೆ)






೮

[ಸುಮೇಧ ರಾಜ್ಯ ಸಿಂಹಾಸನವನ್ನು ದುಸ್ತಂತ್ರದಿಂದ ಆಕ್ರಮಿಸಿಕೊಂಡ ವೀರಸಿಂಹನಿಗೆ ಮನಶ್ಶಾಂತಿ ಶೂನ್ಯವಾಯಿತು. ವೃದ್ಧ ಮಂತ್ರಿಯನ್ನೂ ವಸಂತನನ್ನೂ ಕಾಪಾಡಿದ ಪ್ರಚ್ಛನ್ನವೀರನು ಯಾರೆಂದು ಗೊತ್ತಾಗಲಿಲ್ಲ. ಯಾವ ನಿಮಿಷದಲ್ಲಿ ಯಾರಿಂದ ಎಲ್ಲಿ ಬಂಡಾಯವೇಳುತ್ತದೋ ಎಂದು ಅನುಕ್ಷಣವೂ ಹೆದರುತ್ತ, ವೀರಸಿಂಹನು ಅನುಮಾನಕ್ಕೊಳಗಾದ ಎಲ್ಲರನ್ನೂ ಕಾಡಲು ತೊಡಗಿದನು. — ಆಮೇಲೆ]

ದಿನದಿಂದ ದಿನಕ್ಕೆ ವೀರಸಿಂಹನಲ್ಲಿ ಸಹನೆ ಸಂಪೂರ್ಣ ನಾಶವಾಯಿತು. ತನ್ನ ಹೆಸರು ಕೇಳಿದ ಕೂಡಲೇ ಪ್ರಜೆಗಳು ನಡುಗಬೇಕು. ತ್ರಾಹಿಯೆಂದು ಶರಣಾಗತಿಯಾಗಬೇಕು. ಹೀಗಾದರೇನೇ ಪ್ರಜೆಗಳು ದಾರಿಗೆ ಬರುವರೆಂಬ ನಿಶ್ಚಯಕ್ಕೆ ಬಂದು, ವೀರಸಿಂಹನು ತನ್ನ ವಿಶ್ವಾಸದ ಅನುಚರರಲ್ಲಿ ಒಬ್ಬನಾದ ಕಪಾಲಕಂಕನೆಂಬ ದಳಪತಿಯನ್ನು ಸೇನಾಧಿಪತಿಯಾಗಿ ನಿಯಮಿಸಿದನು.

ಏಕೆಂದರೆ ತನ್ನ ರಾಜ್ಯದ ಪ್ರಜೆಗಳು ಅಡಗಿಹೋಗಬೇಕಾದರೆ ಅಕ್ಕಪಕ್ಕಗಳ ರಾಜ್ಯಗಳನ್ನು ಜಯಿಸಲು ಪ್ರಾರಂಭಿಸಬೇಕು. ಆಗತಾನೇ ಸುಮೇಧದ ಮಹಾರಾಜನೆಂಬ ನಂಬುಗೆ ಎಲ್ಲರಲ್ಲೂ ಏರ್ಪಡುತ್ತದೆ. ಆದರಿಂದ ರಾಜ್ಯವೂ ವಿಸ್ತಾರವಾಗುತ್ತದೆ. ತನ್ನ ಈ ಅಭಿಲಾಷೆಯನ್ನು ರಹಸ್ಯಮಂದಿರದಲ್ಲಿ ದಳಪತಿಗಳೊಂದಿಗೆ ಹೇಳಿದನು.

ಅವರೆಲ್ಲರೂ ಮುಂಗಾಲು ಪುಟಿದು ಸಿದ್ಧರಾಗಿರುವೆವೆಂದು ಉತ್ಸಾಹದಿಂದ ಹೇಳಿದರು. ಆ ಯುದ್ಧದಲ್ಲಿ ಪರರಾಜ್ಯಗಳನ್ನು ಮನಬಂದ ಹಾಗೆ ದೋಚಿಕೊಳ್ಳಬಹುದೆಂದು ಅವನ ಸೈನಿಕರಲ್ಲಿಯೂ ದುರಾಶೆಯೆದ್ದಿತು.



Scanned by CamScanner



ತಪ್ಪುದಾರಿ ಮೆಟ್ಟಿ ಅಟ್ಟಹಾಸದಲ್ಲಿ ಹೋಗುವವರು ಮುಂದೆ ಮತ್ತಷ್ಟು ತಪ್ಪು ದಾರಿಯಲ್ಲೇ ಸಾಗುವ ಹಾಗೆ ವೀರಸಿಂಹನು ಒಂದು ದಿನ ರಾತ್ರಿ ಹೊಸ ಸೇನಾಧಿಪತಿ ಕಪಾಲಕಂಕನನ್ನು ತನ್ನ ರಹಸ್ಯ ಮಂದಿರಕ್ಕೆ ಕರೆಯಿಸಿ, "ನೋಡು, ಈಗ ನಮ್ಮ ನೆರೆಹೊರೆಯ ರಾಜ್ಯಗಳ ಮೇಲೆ ದಂಡೆತ್ತಬೇಕಾದ ಸಮಯ ಸನ್ನಿಹಿತವಾಗಿದೆ. ಇದರ ಬಗ್ಗೆ ಏನು ನಿನ್ನ ಅಭಿಪ್ರಾಯ ?" ಎಂದು ಕೇಳಿದನು.

ಕಪಾಲಕಂಕನ ಮುಖವು ಆನಂದದಿಂದ ಅರಳಿ ಇಪ್ಪಗಲವಾಯಿತು. ಒಂದರ ಹಿಂದೊಂದಾಗಿ ಏನೇನೋ ಮಧುರ ಊಹನೆಗಳಿಂದ ಕೈಮುಗಿದು, "ನಾನೂ ಅದನ್ನೇ ನೆನೆದುಕೊಂಡಿದ್ದೇನೆ ಪ್ರಭೂ. ಈಗ ನಾವು ನೆರೆಯ ಒಂದು ರಾಜ್ಯದ ಮೇಲೆ ಯುದ್ಧ ಪ್ರಕಟಿಸಿಬಿಟ್ಟೆವೆಂದರೆ ಇಲ್ಲಿಯ ಪ್ರಜೆಗಳ ದೃಷ್ಟಿ ಆ ಕಡೆಗೆ ತಿರುಗಿಬಿಡುತ್ತದೆ. ಯುದ್ಧದಲ್ಲಿ ಜಯವಾಗುವುದೋ ಅಪಜಯವಾಗುವುದೋ ಎಂಬ ವಿಷಯದ ಮೇಲೆಯೇ ಅವರ ಆಲೋಚನೆ ಹರಿಯುತ್ತದೆ. ಆದರಿಂದ ಹೊಸ ಪ್ರಭುಗಳ ಮೇಲೆ ಅವರಿಗೆ ಬರುವ ಅತೃಪ್ತಿ ತಗ್ಗಿ ಹೋಗುವ ಸಾಧ್ಯತೆ ಇದೆ. ಅದರ ಮೇಲೆ ನೆರೆಯ ರಾಜ್ಯವನ್ನು ಜಯಿಸಿಬಿಟ್ಟೆವೆಂದರೆ ಅಲ್ಲಿಯ ಧನಸಂಪತ್ತುಗಳೆಲ್ಲಾ ನಮ್ಮದಾಗುತ್ತವೆ. ಹಾಗೆ ನಮ್ಮ ರಾಜ್ಯದ ಭೋಗಭಾಗ್ಯಗಳು ಹೆಚ್ಚಾಗುವುದರಿಂದ, ಆ ಸಂತೋಷ ಪ್ರಜೆಗಳಿಗೂ ಲಭಿಸಿ ತಮ್ಮ ಮೇಲೆ ವಿಶ್ವಾಸ ಬಲಿಯುತ್ತದೆ. ಇದು ಕಾಲೋಚಿತವಾದ ಬಹು ದಿವ್ಯವಾದ ಆಲೋಚನೆ ಮಹಾಪ್ರಭೂ ! ಆಜ್ಞೆಯಾಗಲಿ" ಎಂದನು ಕಪಾಲಕಂಕ.

"ಭೇಷ್ ! ನನ್ನ ಆಲೋಚನೆಗೆ ಸರಿಯಾಗಿಯೇ ನಿನ್ನ ಮುತ್ಸದ್ದಿತನದ ಆಲೋಚನೆ ಕೂಡುತ್ತದೆ. ಒಳ್ಳೆಯದು. ಮೊದಲು ಯಾವ ರಾಜ್ಯದ ಮೇಲೆ ದಂಡೆತ್ತೋಣ, ಹೇಳು ನೋಡುವಾ" ಎಂದನು ವೀರಸಿಂಹ.

"ಇದನ್ನು ಕೂಡಾ ನಾನು ಮುಂದಾಗಿಯೇ ಆಲೋಚಿಸಿಟ್ಟಿದ್ದೇನೆ ಪ್ರಭೂ. ನಾವು ನಮ್ಮ ದಂಡೆಯಾತ್ರೆಯನ್ನು ಅಮೃತಪುರಿಯ ಮೇಲೆ ಪ್ರಾರಂಭಿಸುವುದು ಒಳ್ಳೇದು. ಏಕೆಂದರೆ ಅಮೃತಪುರಿಯ ರಾಜ ಸತ್ಯಸೇನನು ಶಾಂತಿದೇವನ ಮಾವ. ಅವನು ಈ ಸಮಯದಲ್ಲಿ ನಿಮ್ಮ ಮೇಲಿನ ದ್ವೇಷದಲ್ಲಿ ಏನಾದರೂ ಪಥಕವನ್ನು ಆಲೋಚಿಸಿರಲಿಕ್ಕೂ ಸಾಕು. ಅದಕ್ಕೇ ನಾನು ಅಮೃತಪುರಿಯಿಂದ ಬರುವ ಚಾರರೆಲ್ಲರನ್ನೂ, ಪ್ರಯಾಣಿಕರನ್ನೂ ಸಹ ಖೈದು ಮಾಡಬೇಕೆಂದು ಈಗಾಗಲೇ ಆಜ್ಞಾಪಿಸಿದ್ದೇನೆ. ಅಲ್ಲಿಂದ ಯಾರು ಹೇಗೆ ಬಂದರೂ ಗೂಢಚಾರರೆಂದೇ ಅನುಮಾನಿಸುತ್ತೇನೆ ಪ್ರಭೂ" ಎಂದನು ಕಪಾಲಕಂಕ.

ಅವನ ಮಾತಿಗೆ ವೀರಸಿಂಹನು ತಲೆದೂಗುತ್ತ, "ಭೇಷ್ ! ನಿನ್ನ ಅಭಿಪ್ರಾಯವೇ ನನ್ನದೂ ಆಗಿದೆ.



Scanned by CamScanner

ಸತ್ಯಸೇನನು ಶರೀರ ಪರಿಸ್ಥಿತಿಯಲ್ಲಿ ಅಸ್ವಸ್ಥನಾಗಿರುವನೆಂದು ಗೂಢಚಾರರ ಮೂಲಕ ಗೊತ್ತಾಗಿದೆ. ಇದು ನಮಗೊಂದು ಅತ್ಯುತ್ತಮವಾದ ಅವಕಾಶ. ನೀನು ಈಗಲೇ ಯುದ್ಧ ಸನ್ನಾಹಕ್ಕೆ ಪ್ರಾರಂಭಿಸು. ನದಿಯನ್ನು ದಾಟಲಿಕ್ಕೆ ಬೇಕಾದಷ್ಟು ದೋಣಿಗಳು ನಮ್ಮಲ್ಲಿವೆಯೇ ? ಒಮ್ಮೆಗೇ ಸೈನಿಕರೆಲ್ಲಾ ದಾಟಿಬಿಡಬೇಕು. ಅದಕ್ಕೆಲ್ಲ ಸರಿಯಾದ ದೋಣಿಗಳಿವೆಯೇ ? " ಎಂದು ಕೇಳಿದನು.



" ಆಯುಧಗಳನ್ನು ದಾಟಿಸಲಿಕ್ಕೂ, ದಳಪತಿಗಳನ್ನು ದಾಟಿಸಲಿಕ್ಕೂ ಸಾಕಾಗುವಷ್ಟು ದೋಣಿಗಳು ತಯಾರಾಗಿವೆ. ಉಳಿದ ಸೈನಿಕರು ಈಜುತ್ತಾ ನದಿಯನ್ನು ದಾಟಿಬಿಡುತ್ತಾರೆ. ಈ ಋತುವಿನಲ್ಲಿ ಸುಮತೀ ನದಿಯ ಆಳ ಹೆಚ್ಚು ಕಡಿಮೆ ಸರಾಸರಿ ಎದೆಯುವರೆಗಷ್ಟೇ ಇರುತ್ತೆ. ಎಲ್ಲಾ ನಮಗೆ ಸಾಧಕವೇ " ಎಂದನು ಕಪಾಲಕಂಕ.

" ಒಳ್ಳೆಯದು. ಹಾಗಾದರೆ ನದಿಯನ್ನು ದಾಟಿಸಲು ಎಷ್ಟು ದಿನಗಳಲ್ಲಿ ಸಿದ್ಧತೆಯಾಗುತ್ತದೆ ? " ಎಂದು ವೀರಸಿಂಹನು ಕೇಳಿದನು.

" ಪ್ರಭುಗಳ ಆಜ್ಞೆಯಾದರೆ ನಾಳೆಯೇ ಸಿದ್ಧವಾಗಿಬಿಡುತ್ತದೆ " ಎಂದನು ಕಪಾಲಕಂಕ.

" ಶಾಭಾಸ್ ! ಕಪಾಲಕಂಕಾ ! ಶಾಭಾಸ್ ! ಸೇನಾಪತಿ ಅಂದರೆ ಹೀಗಿರಬೇಕು. ನೀನು ನಿಜಕ್ಕೂ ಘನ ಸತ್ಕಾರಗಳಿಗೆ ಅರ್ಹನಾಗಿರುವಿ. ಅಮೃತಪುರಿಯನ್ನು ಜಯಿಸಿ ತಿರುಗಿ ಬಂದ ಕೂಡಲೇ ಎಲ್ಲದಕ್ಕೂ ಮೊದಲು ನಿನ್ನ ಸತ್ಕಾರ ಸಮಾರಂಭ ನಡೆಯುತ್ತದೆ. ನಾಡದು ರಾತ್ರಿ ನದಿ ದಾಟಲು ಸೈನ್ಯವನ್ನೆಲ್ಲಾ ಸಿದ್ಧಪಡಿಸು.

" ತಾವು ಮಹಾ ಮೇಧಾವಿಗಳು ಮಹಾಪ್ರಭೂ, ನಾಡದು ಒಳ್ಳೆಯ ಬೆಳದಿಂಗಳಿನ ಹುಣ್ಣಿಮೆ. ನಮ್ಮ ಸೇನೆಗಳು ಸದ್ದಿಲ್ಲದೆ ನದಿಯನ್ನು ದಾಟಿ ಥಕ್ಕನೆ ಅಮೃತಪುರಿ ರಾಜಧಾನಿಯ ಮೇಲೆ ಬಿದ್ದುಬಿಟ್ಟರೆ, ಒಂದೂ ಅರಿಯದ ಅಲ್ಲಿಯ ಸೈನಿಕರು ಮೋಸ ಹೋಗಿ ಬೆಳಗಾಗುವುದರೊಳಗೆ ಆ ದೇಶವು ನಮ್ಮದಾಗಿಬಿಡುತ್ತದೆ " ಎಂದನು ಕಪಾಲಕಂಕ.

ವೀರಸಿಂಹನು ನಗುತ್ತ ಕಪಾಲಕಂಕನ ಬೆನ್ನನ್ನು ತಟ್ಟಿದನು. ಕಪಾಲಕಂಕನು ಅವನಿಗೆ ನಮಸ್ಕಾರ ಮಾಡಿ, ಎದೆಯುಬ್ಬಿಸಿ ಹಿಂದಿರುಗಿ ವೀರಸಿಂಹನ ಆಜ್ಞೆ ನೆರವೇರಿಸುವ ತವಕದಲ್ಲಿ ಹೊರಟನು.

ಆ ರಾತ್ರಿಯಲ್ಲೇ ಕಪಾಲಕಂಕನು ದಳನಾಯಕರ ಸಮಾವೇಶ ಮಾಡಿಸಿದನು. ಅವರೊಂದಿಗೆ ವೀರಸಿಂಹನ ನಿರ್ಣಯವನ್ನು ವಿಶದಪಡಿಸಿದನು. ಆ ಸಮಾಚಾರವನ್ನು ಕೇಳಿ ದಳನಾಯಕರೆಲ್ಲಾ ಬಹಳ ಸಂತೋಷಪಟ್ಟರು. ಏಕೆಂದರೆ ಅಮೃತಪುರಿಯ ಸೇನೆಗಳು ತಮ್ಮನ್ನು ಇದಿರಿಸಿ ಯುದ್ಧ ಮಾಡುವಷ್ಟು ಬಲವುಳ್ಳದ್ದಲ್ಲವೆಂದು ಅವರಿಗೆಲ್ಲಾ ಚೆನ್ನಾಗಿ ಗೊತ್ತಿತ್ತು. ತಮಗಿಂತ ಬಲಹೀನರಾದವರನ್ನು ಸದೆಬಡಿಯುವುದರಲ್ಲಿ ಅಲ್ಪ ಬುದ್ಧಿಯ



Scanned by CamScanner



ದುರಾಶಾಪೀಡಿತರಿಗೆ ಬಹಳ ಸಂತೋಷವಿರುತ್ತವೆ. ಇದರ ಮೇಲೆ ಅಮೃತಪುರಿಯ ಪ್ರಜೆಗಳು ಒಳ್ಳೆಯ ಧನವಂತರಾಗಿದ್ದಾರೆ. ಯುದ್ಧ ಮುಗಿದ ಕೂಡಲೇ ಅಲ್ಲಿಯ ಪ್ರಜೆಗಳ ಸಂಪತ್ತೆಲ್ಲಾ ತಮ್ಮದಾಗುತ್ತ ವೆಂದು ಅವರೆಲ್ಲ ಭಾವಿಸಿದರೆ ಆಶ್ಚರ್ಯವಿಲ್ಲ! ಹೇಗೆ ಮುತ್ತಿಗೆ ಹಾಕಬೇಕೆಂದು ಆ ಸಮಾವೇಶದಲ್ಲಿ ಪಥಕ ಹಾಕಿಕೊಂಡ ಮೇಲೆ ಕಪಾಲಕಂಕನು ಅವರನ್ನು ನೋಡಿ, "ಈ ಕ್ಷಣದಿಂದಲೇ ಯುದ್ಧದ ಸನ್ನಾಹ ಗಳು ಪ್ರಾರಂಭವಾಗಬೇಕು. ಈ ರಹಸ್ಯವು ಹೊರ ಬಿದ್ದುಬಿಟ್ಟರೆ ನಿಮ್ಮ ಪ್ರಾಣಗಳು ಉಳಿಯಲಾರವು. ಜಾಗ್ರತೆ! ತ್ವರೆ ಮಾಡಿರಿ!" ಎಂದು ಎಚ್ಚರಿಸಿ ಹೇಳಿದನು.

ಅಲ್ಲಿಂದ ಹೊರಟ ಒಬ್ಬ ದಳನಾಯಕನು, ಬೇಗ ಬೇಗನೇ ನೆಟ್ಟಗೆ ಬಂದು ಪಾನಶಾಲೆಗೆ ಹೋಗಿ ಕುಳಿತುಕೊಂಡು ಪಾನಸೇವನೆ ಮಾಡುತ್ತ, ಆ ಪಾನ ಶಾಲೆಯ ಯಜಮಾನನೊಂದಿಗೆ, "ನಾನು ನಿನಗೆ ಐವತ್ತು ಬೆಳ್ಳಿ ನಾಣ್ಯ ಬಾಕಿಯಾಗಿದ್ದೇನಲ್ಲವೆ? ಏನೂ ದಿಗಿಲು ಬೀಳಬೇಡ. ನಾನು ಹಿಂದಿರುಗಿ ಬಂದ ಕೂಡಲೇ ಬೆಳ್ಳಿ ನಾಣ್ಯಗಳೇನು ಕರ್ಮ, ನಿನಗೆ ಐವತ್ತು ಚಿನ್ನದ ನಾಣ್ಯಗಳನ್ನೇ ಕೊಡುತ್ತೇನೆ" ಎಂದನು.

"ಎಲ್ಲಿಂದ ಹಿಂದಿರುಗಿ ಬಂದ ಮೇಲೆ?" ಎಂದು ಕೇಳಿದನು ಯಜಮಾನ.

"ನದೀ ದಾಟ ಹೋಗಿ ಹಿಂದಿರುಗಿ ಬಂದ ಮೇಲೆ. ಇದರ ಬಗ್ಗೆ ಇನ್ನೇನೂ ಕೇಳಬೇಡ" ಎಂದನು ಆ ದಳನಾಯಕ,

"ಯಾವಾಗ ತಿರುಗಿ ಬರುವುದು?" ಎಂದು ಪಾನಶಾಲೆಯೊಡೆಯ ಮತ್ತೂ ಕೇಳಿದ.

"ನಾಳೆ ರಾತ್ರಿ ಯಾವ ಹೊತ್ತಿಗೂ ಹಿಂದಿರುಗಿ ಬರಬಹುದು. ಏಕೆಂದರೆ ಮುತ್ತಿಗೆಗೆ ಹೋಗುವುದೇ ನಾಳೆ ರಾತ್ರಿ ತಾನೇ?" ಎಂದನು ದಳನಾಯಕ ಮುಗುಳು ನಗುತ್ತ.

ಆ ಪಾನಶಾಲೆಯ ಮುಂದೆ ಕುಳಿತಿದ್ದ ಯುವಕ ನೊಬ್ಬನು ಇವರ ಸಂಭಾಷಣೆಯನ್ನು ಕಿವಿಗೊಟ್ಟು ಕೇಳುತ್ತಿದ್ದಾನೆಂದು ಅವರಿಗೆ ತಿಳಿಯಲಿಲ್ಲ. ಯಾರಿಗೂ ತಿಳಿಯಲಿಲ್ಲ. ಏಕೆಂದರೆ ಅವನೊಬ್ಬ ಬಿಕಾರಿಯ ಹಾಗಿದ್ದನು. ಅವನ ಮಿಂಚಿನಂತಹ ಕಣ್ಣಿನಲ್ಲಿ ಅಚಂಚಲವಾದ ಧೈರ್ಯವೂ, ವಿವೇಕವೂ ಅಡಗಿ ಕೊಂಡಿತ್ತು. ಅದು ಸಾಧಾರಣದವರಿಗೆ ಹೇಗೆ ಅರ್ಥವಾದೀತು?

ಆ ಬಿಕಾರಿ ವೇಷದವನು ವಸಂತನೇ. ತನ್ನ ರಾಜ್ಯದಲ್ಲಿ ಏನು ನಡೆಯುತ್ತದೆಂಬುದನ್ನು ಗಮನಿಸಲು, ಆಸಕ್ತಿಯುಳ್ಳವನಾಗಿ ಬೇರೆ ಬೇರೆ ವೇಷ ಗಳಿಂದ, ಸುಮೇಧ ರಾಜ್ಯದೊಳಗೆಲ್ಲಾ ತಿರುಗುತ್ತ, ಶಕ್ತಿ ಸಂಪನ್ನರಾದ ಯುವಕರನ್ನು ತನ್ನ ಪಕ್ಷಕ್ಕೆ ಸೇರಿಸಿ ಕೊಳ್ಳುವ ಕೆಲಸ ಮಾಡುತ್ತಿದ್ದನು. ವೀರಸಿಂಹನ ದುಷ್ಟತನವನ್ನು ಬಹಳ ದಿನ ಸಾಗಲು ಬಿಡಕೂಡದು.



Scanned by CamScanner

ಅವರ ಚಿತ್ರವನ್ನು ನೋಡಲೇಬೇಕೆಂಬುದು ಉದ್ದೇಶ ವಾದರೂ ಅದು ಯಾವಾಗ ಎಂಬುದು ಮಾತ್ರ ಅವನಿಗೆ ತಿಳಿಯದು. ಆದರೆ ವೀರಸಿಂಹನು ತನಗೆ ವಿಧಿಸಿದ ಮರಣ ಶಿಕ್ಷೆಯಿಂದ ತನ್ನನ್ನು ಕಾಪಾಡಿದ ಮುಸುಕಿನ ವೀರನ ಮೇಲೆ ಅವನಿಗೆ ಅಪಾರ ನಂಬುಗೆ ಇದ್ದಿತು. ಆ ಮುಸುಗು ವೀರನು ಆಗಾಗ, "ಘಾತುಕನಾದ ವೀರಸಿಂಹನ ದುರಾಡಳಿತದಿಂದ ಪಾಪದ ಪ್ರಜೆಗಳನ್ನು ರಕ್ಷಿಸಲೇಬೇಕು. ಆ ಕೆಲಸ ಮಾಡುವಾಗ ನಾವು, ವೀರಸಿಂಹನ ಭಟರಿಗಾದರೂ ಕೂಡ ಅತ್ಯಗತ್ಯವಿಲ್ಲದೆ ಕೊಲ್ಲುವ ಕ್ರೂರತನ ತೋರಿಸಬಾರದು. ಏಕೆಂದರೆ ಸೈನಿಕರಾಗಲಿ, ದಳ ನಾಯಕರಾಗಲಿ ಒಡೆಯನ ಆಜ್ಞೆಯನ್ನು ಪಾಲಿಸ ಬೇಕಾದವರಾದ್ದರಿಂದ ಅವರು ಮರಣ ಶಿಕ್ಷೆಗೆ ಅರ್ಹ ರೆನಿಸಲಾರರು. ಆದರೆ ಯಾವ ಅಧಿಕಾರಿಯಾದರೂ ನಮ್ಮ ಎಚ್ಚರಿಕೆಯನ್ನು ಲಕ್ಷ್ಯಮಾಡದೆ ಪಾಪದ ಪ್ರಜೆಗಳನ್ನೂ, ಸ್ತ್ರೀಯರನ್ನೂ ಹಿಂಸಿಸುವನಾದರೆ ನೋಡಿ ಸುಮ್ಮನಿರಬಾರದು. ಅಂಥವರಿಗೆ ಶಿಕ್ಷೆ ಕೊಡಲು ಹಿಂಜರಿಯಬಾರದು" ಎಂದು ಆಗಾಗ ಹೇಳುತ್ತಲೇ ಇರುವನು.

ಎಷ್ಟೇ ಪರಿಶೀಲಿಸಿ ನೋಡಿದರೂ ಆ ಪ್ರಚ್ಛನ್ನ ವೀರನು ಯಾರು, ಎಂಥವನೆಂಬುದು ಮಾತ್ರ ವಸಂತನಿಗೆ ಗೊತ್ತಾಗಲಿಲ್ಲ. ಅದನ್ನು ಅವನ ಹತ್ತಿರ ಕೇಳಿಬಿಟ್ಟರೆ, "ಅದನ್ನು ಕೇಳಬೇಡ. ತಕ್ಕ ಕಾಲ ಸನ್ನಿಹಿತವಾದಾಗ ನಿನಗೇ ತಿಳಿಯುತ್ತದೆ. ಯಾವ ವಿಷಯದಲ್ಲೇ ಆಗಲಿ, ಅವಸರವು ಪ್ರಯೋಜನಕ್ಕೆ ಬಾರದು" ಎಂದು ಆ ಮುಸುಗಿನ ವೀರ ಪ್ರವರನು ಗಂಭೀರ ಕಂಠದಿಂದ ಹೇಳುವನು. ವಸಂತನ ಮನಸ್ಸು ಅವನಿಗೆ ರಾಜ ಗೌರವವು ಕೊಡುತ್ತಿದ್ದಿತು.

ಅಂತಹ ವಸಂತನು ಮೌನವಾಗಿ ಆ ಪಾನ ಶಾಲೆಯಿಂದ ಹೊರಗೆ ಬಂದನು. ದ್ವಾರದ ಮುಂಭಾಗ ದಲ್ಲಿ ಕತ್ತಲೆ ಆವರಿಸಿಕೊಂಡಿದ್ದಿತು. ಅಲ್ಲಿದ್ದ ಸ್ತಂಭಕ್ಕೆ



ದಳನಾಯಕನ ಕುದುರೆ ಕಟ್ಟಲ್ಪಟ್ಟಿದ್ದಿತು. ಬೇರೆ ಯವರ ಕುದುರೆಗಳೂ ಅಲ್ಲಲ್ಲಿ ಕಟ್ಟಲ್ಪಟ್ಟಿದ್ದುವು.

ವಸಂತನು ಒಂದು ಕುದುರೆಯ ಸಮೀಪ ಹೋಗಿ, ಮೈದಡವಿ ತಟ್ಟಿ, ಒಳಿತು ಮಾಡಿಕೊಂಡು, ಕಟ್ಟನ್ನು ಬಿಚ್ಚಿ, ಸದ್ದಾಗದಂತೆ ಕುದುರೆಯನ್ನು ಕತ್ತಲೆಯಲ್ಲೇ ಸ್ವಲ್ಪ ದೂರ ನಡೆಸಿ ಮುಂದೆ ಸಾಗಿ ಹೋಗಿ, ಒಂದೇ ಹಾರಿಕೆಗೆ ಕುದುರೆಯ ಮೇಲೆ ಲಂಘಿಸಿ ಕುಳಿತು, ಮುಂದಕ್ಕೆ ಹುರುಡಿಸಿಕೊಂಡು ಹೋದನು.

ಒಂದು ಗಂಟೆ ಹೊತ್ತಿನಲ್ಲಿ ಅವನು ಸುಮತೀ ನದಿಯ ತೀರವನ್ನು ತಲುಪಿ, ಕುದುರೆಯನ್ನು ಅಲ್ಲಿಯೇ ಬಿಟ್ಟು, ಆಳವು ಕಡಿಮೆಯಾಗಿದ್ದ ಜಾಗ ದಲ್ಲಿ ನದಿಯಲ್ಲಿಳಿದು ಈಜುತ್ತಾ, ಮತ್ತೊಂದು ಗಂಟೆಯಲ್ಲಿ ಆಚೆಯ ತೀರದಲ್ಲಿರುವ ಅಮೃತಪುರಿ ಯನ್ನು ಸೇರಿಕೊಂಡನು.

ಅಮೃತಪುರಿ ಚಿಕ್ಕ ನಗರವಾಗಿತ್ತು. ಅಲ್ಲಿಯ ಪ್ರಜೆಗಳು ಶಾಂತಿಪ್ರಿಯರಾಗಿದ್ದವರು. ಆ ರಾತ್ರಿಯ



ಹೊತ್ತಿನಲ್ಲಿ ಗಾಢನಿದ್ರೆಯಲ್ಲಿದ್ದರು. ವಸಂತನು ನೇರಾಗಿ ಮಂತ್ರಿಯ ಭವನಕ್ಕೆ ಹೋಗಿ, ಕಾವಲಿನ ಭಟರೊಂದಿಗೆ ತತ್‌ಕ್ಷಣದಲ್ಲೇ ಮಂತ್ರಿಯನ್ನು ನೋಡಬೇಕೆಂದನು.

ಆ ಸಮಯಕ್ಕೆ ಮಂತ್ರಿ ಎಚ್ಚರದಲ್ಲೇ ಇದ್ದುದರಿಂದ, ಅವನ ಕಂಠಸ್ವರದಲ್ಲಿರುವ ಆತುರತೆಯನ್ನು ಗಮನಿಸಿ, ಅವನನ್ನು ಒಳಗೆ ಕಳುಹಿಸಲು ಭಟರಿಗೆ ಆಜ್ಞೆ ಮಾಡಿದನು.

ವಸಂತನು ಒಳಗೆ ಹೋಗಿ, ವೀರಸಿಂಹನ ದುರಾಕ್ರಮಣ ದುಸ್ತಂತ್ರದ ಪಥಕ ಕ್ರಮವನ್ನು ಕುರಿತು ಮಂತ್ರಿಗೆ ತಿಳಿಸಿದನು. ಆಮೇಲೆ ಮಂತ್ರಿ ಆಗಲೇ ತಮ್ಮ ಸೇನಾಪತಿಯನ್ನು ಕರೆಯಿಸಿ, ಇಬ್ಬರೂ ಕೂಡಿ ರಾಜಭವನದ ಕಡೆಗೆ ಹೊರಟರು.

ಅನಾರೋಗ್ಯದಲ್ಲಿದ್ದ ಸತ್ಯಸೇನ ರಾಜನು ಮಂತ್ರಿ ಹೇಳಿದ ಮಾತುಗಳನ್ನು ಕೇಳಿ "ನನ್ನ ಅಳಿಯನೂ, ಮಗಳೂ ದೂರವಾಗಿ ಹೋದರು. ಈಗ ಈ ರಾಜ್ಯವೇ ಶತ್ರುವಿನ ವಶಕ್ಕೆ ಸೇರುವ ಹಾಗಿದೆ. ಇದೆಂಥ ಗಂಡಾಂತರ!" ಎಂದು ದುಗುಡದಿಂದ ಉದ್ಗರಿಸಿದನು.

"ಹತಾಶರಾಗಬೇಡಿ ಪ್ರಭೂ, ಕುಲದೇವಿಯ ಮೇಲೆ ಆಣೆ ಮಾಡಿ ಹೇಳುತ್ತೇನೆ. ನನ್ನ ಶರೀರದಲ್ಲಿ ಬೊಟ್ಟು ರಕ್ತ ಉಳಿಯುವವರೆಗೂ ದೇಶವನ್ನು ರಕ್ಷಿಸುತ್ತೇನೆ" ಎಂದನು ಸೇನಾಧಿಪತಿ.

"ನಿನ್ನ ರಾಜಭಕ್ತಿ ನನಗೆ ಗೊತ್ತಿದೆ. ಆದರೆ ಸುಮೇಧದೊಂದಿಗೆ ಹೋಲಿಸಿದರೆ ನಮ್ಮ ಸೈನಿಕ ಬಲವು ಬಹಳ ಕಡಿಮೆ ತಾನೆ? ಮೊದಲು ನೀವೆಲ್ಲಾ ಬಳೀ ಝುಂಡಾದೊಂದಿಗೆ ನದಿಯ ತೀರವನ್ನು ಸೇರಿ, ಶತ್ರುಗಳು ಬಂದ ಕೂಡಲೇ ಅವರೊಂದಿಗೆ ಸಂಧಿ ಮಾಡಿಕೊಳ್ಳಲು ಪ್ರಯತ್ನ ಮಾಡುವುದು ಒಳ್ಳೆಯದು. ನಾವು ಸುಮೇಧಕ್ಕೆ ಕಪ್ಪ ಕಟ್ಟುತ್ತೇವೆಂದು ತಿಳಿಸಿಬಿಡಿರಿ" ಎಂದನು ಸತ್ಯಸೇನ ರಾಜ.

ಮಂತ್ರಿಯೂ ಸೇನಾಪತಿಯೂ ಸ್ವಲ್ಪಹೊತ್ತು ಸುಮ್ಮನಿದ್ದರು. ಆಮೇಲೆ ಮಂತ್ರಿ, "ಪ್ರಭೂ, ನಿಮ್ಮ ಆಜ್ಞೆಯಂತೆಯೇ ನಡೆದುಕೊಳ್ಳುತ್ತೇವೆ. ಈಗ ಬಂದ ಪರಿಸ್ಥಿತಿಯಲ್ಲಿ ನನಗೆ ಕೂಡಾ ಅದೇ ಒಳ್ಳೆಯದೆಂದು ತೋರುತ್ತದೆ. ಆದರೆ ನಮ್ಮ ಪ್ರತಿಪಾದನೆಯನ್ನು ಅವರು ಗೌರವಿಸಿ ಒಪ್ಪದೆ ಹೋದ ಪಕ್ಷದಲ್ಲಿ ಯುದ್ಧ ಮಾಡಲೇ ಬೇಕಾಗುತ್ತದೆ" ಎಂದನು.

ರಾಜನು ಮೌನವಾಗಿದ್ದನು.

* * *

ಮಾಡಿಕೊಂಡ ಯೋಜನೆಯಂತೆಯೇ ಪೌರ್ಣಮಿ ದಿನದ ರಾತ್ರಿಯಲ್ಲಿ ವೀರಸಿಂಹನ ಸೇನೆಗಳು ಸುಮತೀ ನದಿಯ ತೀರವನ್ನು ಬಂದು ಸೇರಿದುವು. ಎಲ್ಲರೂ ಅತ್ಯಂತ ಉತ್ಸಾಹದಿಂದ ಆಯುಧಗಳನ್ನು ದೋಣಿಗಳಲ್ಲಿ ಏರಿಸಿದರು. ದಳಪತಿಗಳು ಕೂಡಾ ಮತ್ತೆ ಕೆಲವು ದೋಣಿಗಳಲ್ಲಿ ಏರಿಕೊಂಡರು. ಆದಲ್ಲಾ



Scanned by CamScanner

ಆದಮೇಲೆ, ಕಪಾಲಕಂಕನು ಉಳಿದ ಸೈನಿಕರನ್ನು ನೋಡಿ, "ನೀವೆಲ್ಲಾ ಒಮ್ಮೆಗೇ ನದಿಯೊಳಗೆ ಇಳಿದು ಆಚೆಯ ತೀರವನ್ನು ಸೇರಬೇಕು. ಒಬ್ಬರೂ ಹಿಂದೆ ಮುಂದೆ ಆಗಬಾರದು. ಎಚ್ಚರ!" ಎಂದು ಆಜ್ಞೆ ಮಾಡಿದನು.

ಪಕ್ಕದಲ್ಲಿ ನಿಂತಿದ್ದ ವೀರಸಿಂಹನು ಕಪಾಲಕಂಕನನ್ನು ಹೆಮ್ಮೆಯ ಮೆಚ್ಚುಗೆಯಿಂದ ನೋಡುತ್ತ, ತಾನೂ ಒಂದು ದೋಣಿಯಲ್ಲಿ ಏರಿಕೊಂಡನು.

ನದಿಯ ಆಚೆಯ ತೀರದಲ್ಲಿ ಅಮೃತಪುರಿಯ ಸೇನೆಗಳು ಗುಂಪುಗೂಡಿದುವು. ವೀರಸಿಂಹನು ಸಮೀಪಿಸಿದ ಕೂಡಲೇ ಅವನೊಂದಿಗೆ ಸಂಧಿ ಮಾತನ್ನು ಹೇಳಲು ಅಮೃತಪುರಿಯ ಮಂತ್ರಿ ಬಿಳೀ ನಿಶಾನೆಯೊಂದಿಗೆ ಸಿದ್ಧನಾಗಿದ್ದನು.

ಆ ಸಮಯದಲ್ಲಿ ಆಕಾಶದಷ್ಟೆತ್ತರಕ್ಕೆ ಏನೋ ಎದ್ದಂತೆ ಅಕಸ್ಮಾತ್ತಾಗಿ ಭಯಂಕರವಾದ ಶಬ್ದವೊಂದು ಕೇಳಿಬಂತು. ಅದರ ಮಾರ್ದನಿಯೋ ಎಂಬಂತೆ ವೀರಸೇನನ ಸೈನಿಕರ ಹಾಹಾಕಾರಗಳು ಕೇಳಬಂದಿತು. ನದಿಯ ಮೇಲ್ಭಾಗದಲ್ಲೆಲ್ಲಿಯೋ ಬೆಟ್ಟಗಳಲ್ಲಿ ಮಳೆ ಸುರಿದು ಗುಡ್ಡ ಸೀಳಿ ನೆರೆನೀರು ಹೊರಳೋಡಿ ಬಂದುದರಿಂದ ಎಲ್ಲಾ ದೋಣಿಗಳೂ ತಲೆಕೆಳಗಾಗಿ ಹೋದುವು. ಅಡಿಮೇಲಾದ ದೋಣಿಗಳ ಹೊಡೆತದೆಡೆಯಲ್ಲಿ ಈಜುವ ಸೈನಿಕರು ಸಿಕ್ಕಿಕೊಂಡು ತಬ್ಬಿಬ್ಬಾಗಿ ಮಹಾ ಪ್ರವಾಹದ ಸೆಳೆತದಲ್ಲಿ ಕೊಚ್ಚಿಕೊಂಡು ಹೋದರು. ಎಷ್ಟು ಮಂದಿ ನೆರೆಗೆ ಬಲಿಯಾದರೋ, ಎಷ್ಟು ಮಂದಿ ಬದುಕಿ ಎದ್ದರೋ ಗೊತ್ತಾಗಲಿಲ್ಲ. ವೀರಸಿಂಹನೂ, ಕಪಾಲಕಂಕನೂ ಮಾತ್ರವೇ ಕೂದಲೆಳೆಯಷ್ಟರಲ್ಲಿ ಅಪಾಯದಿಂದ ಪಾರಾಗಿ ಹೊರಬಿದ್ದು ಪ್ರಾಣ ಉಳಿಸಿಕೊಂಡರು. ಅವರ ಬದುಕಿದೆವೆಂಬ ನಿಟ್ಟುಸಿರುಗಳು ಶಾಂತವಾಗುವುದರೊಳಗೆ, ಆ ಪ್ರಾಂತವೆಲ್ಲಾ ಮತ್ತೆ ಮೊದಲಿನಂತೆ ಪ್ರಶಾಂತವಾಗಿ ನದಿಯ ನೀರು ಚಂದ್ರ ಪ್ರಕಾಶದಲ್ಲಿ ಲಕಲಕಿಸಿಕೊಂಡಿತ್ತು.

ಈ ಹಠಾತ್ ಪರಿಣಾಮವನ್ನು ನೋಡಿ ಬೆಟ್ಟದಂತೆ ತಲೆಯ ಮೇಲೆ ಬೀಳುವ ಅಪಾಯವು ಹತ್ತಿಯಂತೆ ಹಾರಿಹೋದ ಸುದ್ದಿ ಕೇಳಿ, ಆನಂದದಲ್ಲಿ ಬೆರಗಾಗಿ ಹೋದ ಸತ್ಯಸೇನ ರಾಜನು, "ಈ ಗಂಡಾಂತರದಿಂದ ಭಗವಂತನೇ ನಮ್ಮನ್ನು ಕಾಪಾಡಿದನು" ಎಂದು ಉದ್ಗರಿಸಿದನು. "ಆದರೂ ಇನ್ನು ಮುಂದೆ ನಾವು ಎಂತಹ ದಾಳಿಯನ್ನಾದರೂ ಇದಿರಿಸಲು ಸಿದ್ಧರಾಗಿರಬೇಕು" ಎಂಬಲೂ ಮಂತ್ರಿಯೊಂದಿಗೆ ಹೇಳಿದನು ಸತ್ಯಸೇನ. "ಹೌದು ಪ್ರಭೂ, ಮನುಷ್ಯ ಪ್ರಯತ್ನ ಬಿಡಬಾರದು. ಆಗ ಬೆಂಬಲವಾಗಿ ಬರುತ್ತೆ ಭಗವತ್ಕೃಪೆ" ಎಂದನು ಮಂತ್ರಿ.

—(ಇನ್ನೂ ಇದೆ)



Scanned by CamScanner




೬

[ ಸತ್ಯಸೇನನು ಪರಿಪಾಲಿಸುವ ಅಮೃತಪುರಿಯ ಮೇಲೆ ದಾಳಿಮಾಡಲು ವೀರಸಿಂಹನು ರಹಸ್ಯ ಪಥಕ ಹಾಕಿದನು. ಈ ಸುದ್ದಿ ತಿಳಿದ ಸತ್ಯಸೇನನು, ವೀರಸಿಂಹನೊಂದಿಗೆ ಸಂಧಿ ಮಾಡಿಕೊಳ್ಳುವುದೇ ಒಳ್ಳೆಯದೆಂದು ತನ್ನ ಮಂತ್ರಿಯೊಂದಿಗೆ ಹೇಳಿದನು. ಆದರೆ ವೀರಸಿಂಹನ ಸೇನೆಗಳು ದೋಣಿಗಳಲ್ಲಿ ಸುಮತೀ ನದಿಯನ್ನು ದಾಟುವಾಗ ಆಕಸ್ಮಿಕ ನೆರೆಯುಕ್ಕಿ ಸೇನೆಗಳೆಲ್ಲಾ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದುವು. —ಆಮೇಲೆ ]

ಖಂಡಿತ ವಿಜಯವಾಗುವುದೆಂದು ಮಾಡಿಕೊಂಡ ರಹಸ್ಯ ಪಥಕವು ಹೀಗೆ ಥಕ್ಕನೆ ಅಡಿಮೇಲಾಗಿ ಹೋದುದನ್ನು ನೋಡಿ ದಿಗ್ಭ್ರಾಂತನಾದ ವೀರಸಿಂಹನು ನದಿಯ ತೀರದಲ್ಲಿ ಕಲ್ಲಿನ ಪ್ರತಿಮೆಯಂತೆ ಸ್ತಬ್ಧನಾಗಿ ನಿಂತನು. ಅವನ ಹಾಗೆಯೇ ಬದುಕಿ ಎದ್ದ ಹೊಸ ಸೇನಾಧೀಶನಾದ ಕಪಾಲಕಂಕನು ಭೀತಿಯ ಹೊಡೆತದಲ್ಲಿ ಬಾಯಿ ಬಂದಾಗಿ ಹೋಗಿದ್ದನು. ಸಾವನ್ನು ತಪ್ಪಿಸಿಕೊಂಡ ಕೆಲಮಂದಿ ದಳನಾಯಕರು ಮಾತ್ರ ಪ್ರವಾಹದಲ್ಲಿ ಹೊಡೆದುಕೊಂಡು ಹೋಗುತ್ತಿದ್ದ ಆಯುಧ ಸಾಮಗ್ರಿಗಳನ್ನು ಸ್ವಲ್ಪ ಮಟ್ಟಿಗೆ ತೀರಕ್ಕೆ ಸೇರಿಸುವ ಕೆಲಸ ಮಾಡಿಕೊಂಡಿದ್ದರು. ಆದರೆ ಬಹಳಮಟ್ಟಿಗೆ ಇದ್ದ ಆಯುಧಗಳೆಲ್ಲಾ ನೆರೆ ನೀರಿನ ಪಾಲಾಗಿ ಹೋಗಿಬಿಟ್ಟವು. ಹಾಗೆಯೇ ಅವರ ಕೆಲವು ಆಯುಧಗಳನ್ನು ಅಮೃತಪುರಿಯ ಸೈನಿಕರೂ ಬಿಡದೆ ಸಿಕ್ಕಿದಷ್ಟೂ ಎಳೆದು ತಮ್ಮ ತೀರಕ್ಕೆ ಸೇರಿಸಿಕೊಂಡರು. ಅಲ್ಲದೆ ಪ್ರವಾಹದಲ್ಲಿ ಮುಳುಗೇಳುತ್ತ ಕೊಚ್ಚಿಕೊಂಡು ಹೋಗುತ್ತಿದ್ದ ಶತ್ರು ಸೈನಿಕರನ್ನೂ ಸಹ ಅಮೃತಪುರಿಯ ಸೈನಿಕರು ಎಳೆದೆಳೆದು ಅವರ ಪ್ರಾಣ ರಕ್ಷಣೆ ಮಾಡಿದರು. ಹಾಗೆ ರಕ್ಷಿಸಲ್ಪಟ್ಟವರು ಯುದ್ಧ ಖೈದಿಗಳಾಗಿ ಅಮೃತ



ಪುರಿಯ ಬಂಧೀಖಾನೆಯಲ್ಲಿ ಬಂಧಿಸಿಡಲ್ಪಟ್ಟರು. ಈ ಬಗೆಯ ಗೊಂದಲದೆಡೆಯಲ್ಲೇ ಬೆಳಗಾಯಿತು.

ಮರುದಿನ ರಾಜಾ ಸತ್ಯಸೇನನು ಅಧಿಕಾರಿಗಳನ್ನು ಸಮಾವೇಶಗೊಳಿಸಿ, " ಶತ್ರು ಸೈನಿಕರಿಂದ ಸಂಗ್ರಹಿಸಿದ ಆಯುಧಗಳನ್ನೆಲ್ಲಾ ಉಪಯೋಗವಾಗುವ ಹಾಗೆ ಸಿದ್ಧಗೊಳಿಸಿ ಇಟ್ಟುಕೊಳ್ಳಿರಿ. ಇನ್ನು ಮೇಲೆ ನಮಗೆ ಯಾರ ಸಹಾನುಭೂತಿಯು ಅಗತ್ಯವೂ ಇಲ್ಲ. ನಮ್ಮ ಸೈನಿಕ ಬಲವು ಕಡಿಮೆಯಾದರೂ, ದೈವಿಕ ಸಹಾಯದಂತಹ ಈ ಪ್ರವಾಹದ ಪೆಟ್ಟಿನಲ್ಲಿ ವೀರಸಿಂಹನ ಸೈನಿಕ ಬಲವು ನಮಗಿಂತ ಕಡಿಮೆಯದೇ ಆಯಿತು. ನಮ್ಮ ಸೈನಿಕರೂ ದಳಪತಿಗಳೂ ಸೇನಾಧೀಶನೂ ಜೀವದ ಹಂಗಿಲ್ಲದೆ ಹೋರಾಡಬಲ್ಲವರು. ದುಷ್ಟನಾದ ವೀರಸಿಂಹನು ಇನ್ನು ಕೂಡಾ ಸೈನ್ಯವನ್ನು ಬಲಪಡಿಸಿ ನಮ್ಮ ಮೇಲೆ ಬಾರದಿರನು. ಅದಕ್ಕೆಲ್ಲಾ ನಾವು ಸಿದ್ಧರಾಗಿದ್ದರೆ ಸರಿ, ಬಂಧನದಲ್ಲಿರುವ ವೀರಸಿಂಹನ ಸೈನಿಕರನ್ನು ಕೂಡಲೇ ಬಿಟ್ಟುಬಿಡಿರಿ" ಎಂದು ಆಜ್ಞೆ ಮಾಡಿದನು. ಆಮೇಲೆ ಆ ದಿನ ರಾತ್ರಿ ಮಂತ್ರಿಯೂ, ಸೇನಾಧಿಪತಿಯೂ, ಇಬ್ಬರು ದಳನಾಯಕರೂ ರಾಜಾ ಸತ್ಯಸೇನನನ್ನು ರಹಸ್ಯವಾಗಿ ಕಲೆತುಕೊಂಡರು. ಆಗ ಸೇನಾಧಿಪತಿ ರಾಜನೊಂದಿಗೆ " ಪ್ರಭೂ, ನದಿಯ ಪ್ರವಾಹದಿಂದ ನಮ್ಮ ಸೈನಿಕರಿಂದ ರಕ್ಷಿಸಲ್ಪಟ್ಟ ವೀರಸಿಂಹನ ಸೈನಿಕರನೇಕರು ಶಾಂತಿಪುರಕ್ಕೆ ತಿರುಗಿ ಹೋಗಲು ಇಷ್ಟಪಡುವುದಿಲ್ಲ. ಪ್ರಭುಗಳು ಅನುಜ್ಞೆ ಕೊಟ್ಟರೆ ನಮ್ಮ ಸೈನ್ಯದಲ್ಲಿ ಸೇರಿಕೊಳ್ಳಲು ಸಿದ್ಧರಾಗಿದ್ದಾರೆ " ಎಂದು ಹೇಳಿದನು.

ಸತ್ಯಸೇನ ರಾಜನು ಒಂದೆರಡು ಕ್ಷಣ ಆಲೋಚನೆ ಮಾಡಿ, " ಘಾತಕನಾದ ವೀರಸಿಂಹನು ಸುಮೇಧ ರಾಜ್ಯ ಸಿಂಹಾಸನವನ್ನು ಆಕ್ರಮಿಸಿಕೊಂಡಾಗ ದುರದೃಷ್ಟದಿಂದಾಗಿ ನಾನು ಅಸ್ವಸ್ಥದಲ್ಲಿ ಬಿದ್ದೆನು. ನನ್ನ ಮಗಳೂ ಅಳಿಯನೂ ಮೊಮ್ಮಗನೂ ಏನಾದರೋ ತಿಳಿಯಲಿಲ್ಲ. ಅವರನ್ನು ಕಂಡು ಹಿಡಿಯುವ ವಿವರಗಳನ್ನು ಬರಮಾಡಿಕೊಳ್ಳಬೇಕು. ಅದರ ಮೇಲೆ ಜನ ನಷ್ಟವಾಗುವಂತಹ ಯುದ್ಧ ಮಾಡಬೇಕೆಂಬುದು ನಮ್ಮ ಅಭಿಮತವಲ್ಲ. ಆದರೆ ದುಷ್ಟನಾದ ವೀರಸಿಂಹನು ಏನೂ ಅರಿಯದ ಸುಮೇಧದ ಪ್ರಜೆಗಳಿಗೆ ಯುದ್ಧಕ್ಕಿಂತಲೂ ಹೆಚ್ಚಿನ ಸಂಕಟಗಳನ್ನು ಕಷ್ಟನಷ್ಟಗಳನ್ನು ಕಲ್ಪಿಸುವ ಈ ಪರಿಸ್ಥಿತಿಯಲ್ಲಿ ಅವುಗಳನ್ನು ತಡೆಯಬೇಕಾದ ಬಾಧ್ಯತೆ ನಮಗಿದೆ. ಆದ್ದರಿಂದ ನಮ್ಮ ಪಕ್ಷವನ್ನು ಸೇರುವುದಾಗಿ ಹೇಳುವ ವೀರಸಿಂಹನ ಸೈನಿಕರನ್ನು ಚೆನ್ನಾಗಿ ಶೋಧಿಸಿ ನಮ್ಮ ಸೈನ್ಯದಲ್ಲಿ ಸೇರಿಸಿಕೊಳ್ಳಿರಿ. ತಪ್ಪೇನಿಲ್ಲ. ಬದಲಿಗೆ ನಮ್ಮ ಉದ್ದೇಶಕ್ಕೆ ಸಹಾಯವೂ ಆದೀತು " ಎಂದನು.

ಆಗ ಮಂತ್ರಿ, " ಪ್ರಭುಗಳೇ ! ಇನ್ನೊಂದು ಶುಭವಾರ್ತೆಯುಂಟು. ಶಾಂತಿದೇವ ಮಹಾರಾಜರ ವೃದ್ಧ ಮಂತ್ರಿಯವರು ವೀರಸಿಂಹನು ಮಾಡಿದ

ಹತ್ಯಾ ಪ್ರಯತ್ನದಿಂದ ತಪ್ಪಿಸಿಕೊಂಡಿದ್ದಾರೆ. ಈಗ ಅವರು ನಮ್ಮ ರಾಜ್ಯದಲ್ಲೇ ಇದ್ದಾರೆ!" ಎಂದನು.

"ಹಾಗೇನು? ವೃದ್ಧ ಮಂತ್ರಿಗಳು ಸುಗುಣ ಶೀಲರೂ, ವಿವೇಕಸಂಪನ್ನರೂ ಎಂಬುದು ನಮಗೆ ಗೊತ್ತಿದೆ. ಆದರೆ ಕ್ರೂರ ಹಂತಕರಿಂದ ತಪ್ಪಿಸಿ ಕೊಳ್ಳುವಷ್ಟು ವೀರರಾಗಿರುವ ಸಂಗತಿ ನಮಗೆ ಈಗಷ್ಟೇ ಗೊತ್ತಾಯಿತು!" ಎಂದನು ಸತ್ಯ ಸೇನ ರಾಜ.

"ಆ ವೃದ್ಧ ಮಂತ್ರಿಯವರು ಅಷ್ಟೊಂದು ವೀರ ಸಾಹಸವೇನೂ ತೋರಿಸಲಿಲ್ಲ ಪ್ರಭೂ. ಸಮಯಕ್ಕೆ ಸರಿಯಾಗಿ ಒಬ್ಬ ಮುಸುಕಿನ ವೀರನು ಕುದುರೆಯ ಮೇಲೆ ಬಂದು ವೀರಸಿಂಹನು ನಿಯೋಜಿಸಿದ ಕ್ರೂರ ಕೊಲೆಗಡಕರನ್ನು ಅರೆಕ್ಷಣದಲ್ಲಿ ಹತಮಾಡಿ, ಮಂತ್ರಿಯವರನ್ನು ನಮ್ಮ ರಾಜ್ಯಕ್ಕೆ ಭದ್ರವಾಗಿ ಕಳುಹಿಸಿದ್ದಾನೆ. ಆ ವೃದ್ಧ ಮಂತ್ರಿಯವರ ಅಭಿಪ್ರಾಯ ಪ್ರಕಾರ ಮುಸುಕಿನ ವೀರನು ಹೊರಗಿನವನೇನೂ ಅಲ್ಲ..." ಎಂದು ಮುಂದುವರಿಸಿ ಹೇಳಲಿದ್ದನು.

ಅದುವರೆಗೆ ಹಾಸಿಗೆಯಲ್ಲಿ ಒರಗಿಕೊಂಡಿದ್ದ ಸತ್ಯ ಸೇನ ರಾಜನು ಅತ್ಯುತ್ಸಾಹದಿಂದ ಎದ್ದು ಕುಳಿತು, "ಓಹೋ! ಶಾಂತಿದೇವನೇ ಆ ಮುಸುಗು ವೀರನೋ? ಈಗಲೇ ಆ ವೃದ್ಧ ಮಂತ್ರಿಯನ್ನು ಇಲ್ಲಿಗೆ ಬರಮಾಡಿಸಿರಿ. ಅವರೊಂದಿಗೆ ಮಾತಾಡ ಬೇಕು" ಎಂದನು.

"ಹಾಗೆಯೇ ಕರೆಸುತ್ತೇನೆ ಪ್ರಭೂ. ಇನ್ನೊಂದು ವಿಷಯ ಕೂಡಾ ಕೇಳಿರಿ. ವೃದ್ಧ ಮಂತ್ರಿಯನ್ನು ಕಾಪಾಡಿದ ಆ ಮುಸುಕು ವೀರನೇ ಸುಮೇಧ ರಾಜ್ಯದ ಸಾಧಾರಣ ಪೌರನಾಗಿದ್ದ ವಸಂತನೆಂಬ ಯುವಕನನ್ನೂ ವೀರಸಿಂಹನು ವಿಧಿಸಿದ ಮರಣ ದಂಡನೆಯಿಂದ ಕಾಪಾಡಿದನು. ಆ ವಸಂತನಿಗೆ ಮಹಾರಾಜರಾದ ಶಾಂತಿದೇವರೆಂದರೆ ಅತ್ಯಂತ ಅಭಿಮಾನ, ಭಕ್ತಿ. ವೀರಸಿಂಹನ ದುಷ್ಟ ಲೀಲೆಗಳನ್ನು ಅಂತ್ಯಗೊಳಿಸಬೇಕೆಂದು ಹಟತೊಟ್ಟು ಆ ವಸಂತನು ಬೇರೆ ಬೇರೆ ವೇಷಗಳಿಂದ ತಿರುಗುತ್ತ, ರಾಜ್ಯದೊಳ ಗಿರುವ ಯುವಕರನೇಕರನ್ನು ತನ್ನ ಪಕ್ಷಕ್ಕೆ ಸೇರಿಸಿ ಕೊಳ್ಳುತ್ತಿದ್ದಾನೆ. ಆ ವಸಂತನೇ ವೀರಸಿಂಹನು ನಮ್ಮ ಮೇಲೆ ಆಕಸ್ಮಿಕ ದಾಳಿ ನಡೆಸುವ ಸಂಗತಿ ಯನ್ನು ನಮಗೆ ಮುಂದಾಗಿ ತಿಳಿಸಿದವನು. ಅವನ ಹತ್ತಿರ ನಾವು ಹೇಗೆ ವ್ಯವಹರಿಸುವುದೋ ನನಗೆ ಗೊತ್ತಾಗುವುದಿಲ್ಲ. ಪ್ರಭುಗಳು ಚಿತ್ತೈಸಿ ಹೇಳ ಬೇಕು" ಎಂದನು ಮಂತ್ರಿ.



ಸತ್ಯಸೇನ ರಾಜನು ಮೌನವಾಗಿ ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ವೀರಸಿಂಹನು ರಾಜ ಕುಟುಂಬದ ಸಮೂಲ ನಾಶಕ್ಕೆ ಪ್ರಯತ್ನಿಸಿದರೂ, ನಾವು ಸುಮೇಧ ರಾಜ ವ್ಯವಹಾರಗಳಲ್ಲಿ ಯಾವು ದಕ್ಕೂ ತಲೆ ಹಾಕಿದವರಲ್ಲ. ಆದರೂ ಆ ವಿಶ್ವಾಸ ಘಾತಕನು ನಮ್ಮ ಮೇಲೆ ದಂಡೆತ್ತಲಿಕ್ಕೂ ಹಿಂಜರಿಯ ಲಿಲ್ಲ. ಆದುದರಿಂದ ಆ ದುಷ್ಟನ ಘಾಲನೆಗೆ ಇದಿರು



Scanned by CamScanner



ಕಳುಹಿಸಿ ಅಂತಹ ಸಂಭವವು ಬಂದೀತೆಂದು ಎಚ್ಚರಿಕೆ ತಂದುಕೊಳ್ಳಲಿಲ್ಲವೇಕೆ ? " ಎಂದು ಕೇಳಿದನು.

" ಈ ಋತುವಿನಲ್ಲಿ ಹೀಗೆ ನೆರೆ ಬರುವುದು ಅಪೂರ್ವವೇ ಮಹಾಪ್ರಭೂ. ಆದ್ದರಿಂದ ಈ ಅಪಾಯವನ್ನು ಯಾರೂ ಊಹಿಸಲಿಲ್ಲ. ಇದರ ಮೇಲೆ ನಮ್ಮ ಆಸ್ಥಾನದ ಜ್ಯೋತಿಷ್ಯರೇ ಅದು ದಂಡಯಾತ್ರೆಗೆ ಅದ್ಭುತವಾದ ಸನ್ಮುಹೂರ್ತವೆಂದು ಕಾಲ ನಿರ್ಣಯ ಮಾಡಿ ಹೇಳಿದ್ದಾರಲ್ಲ ! ತಮಗೂ ಗೊತ್ತಿದೆ ! ನನಗೇನೋ ಆ ಜ್ಯೋತಿಷ್ಕನ ವಿಷಯ ದಲ್ಲಿ..." ಎಂದನು ಕಪಾಲಕಂಕ.

" ನಿಜ ನಿಜ ! ಆ ಘಾತಕ ಜ್ಯೋತಿಷ್ಕನನ್ನು ಈಗಲೇ ಹತಮಾಡಿ ಬಿಡು. ಅವನು ಒಳಮೋಸದ ಜೋತಿಷ್ಕನೇ! ಸಂದೇಹವಿಲ್ಲ!" ಎಂದನು ವೀರಸಿಂಹ.

" ಅದಕ್ಕಾಗಿ ನಾನು ಆಗಲೇ ಅವನನ್ನು ಹುಡುಕಿಸಿ ದೆನು. ಎಲ್ಲಿಯೂ ಕಾಣುವುದಿಲ್ಲ. ಸೈನ್ಯವು ನದೀ ತೀರ ಸೇರುವವರೆಗೂ ನಮ್ಮೊಂದಿಗೇ ಇದ್ದನು. ಆಮೇಲೆ ಕಾಣಿಸಲಿಲ್ಲ. ನದಿಯಲ್ಲಿ ಹೊಡೆದುಕೊಂಡು ಸತ್ತನೋ, ಅಲ್ಲ ಅಮೃತಪುರಿಗೆ ಹೋದನೋ ಗೊತ್ತಾಗುವುದಿಲ್ಲ, ಮಹಾಪ್ರಭೂ " ಎಂದನು ಕಪಾಲಕಂಕ.

" ಹುಂ ! ಅಮೃತಪುರಿ ! ಅಮೃತಪುರಿ ! ಅದು ನಮ್ಮ ಪಾಲಿಗೆ ಯಮಪುರಿಯ ಹಾಗೆ ಆಗುತ್ತಾ ಇದೆ ! " ಎಂದು ಕೋಪದಿಂದ ಕಾಲೆತ್ತಿ ನೆಲಕ್ಕೆ ಅಪ್ಪಳಿಸಿದನು ವೀರಸಿಂಹ.

" ಹಾಗನ್ನಬೇಡಿ ಪ್ರಭುಗಳೇ. ಅಮೃತಪುರಿಯನ್ನು ನಾವು ಜಯಿಸದೆ ಬಿಡಲಾರೆವು. ಹೊಸತಾಗಿ ಆಯುಧ ಗಳನ್ನು ಶೇಖರಿಸಿಕೊಂಡು ಸೈನ್ಯವನ್ನು ಬಲಪಡಿಸಿ ಕೊಂಡರೆ ಕಲ್ಲಂಟೆ ಕಾಯಿಯಂಥ ಅಮೃತಪುರಿ ಕ್ಷಣ ಮಾತ್ರದಲ್ಲಿ ನಮ್ಮ ವಶವಾಗುತ್ತದೆ. ಅಷ್ಟರವರೆಗೆ ಸ್ವಲ್ಪ ಸಹನೆಯಿಂದ ಸಾಧನ ಶೇಖರಣೆಯಲ್ಲಿದ್ದರೆ ಸರಿ ! " ಎಂದನು ಕಪಾಲಕಂಕ.

ತಿರುಗುವ ವಸಂತನಿಗೆ ಮತ್ತು ಅವನ ಅನುಚರರಿಗೆ ಕೂಡಾ ನಾವು ಪ್ರೋತ್ಸಾಹ ಕೊಡುವುದೇ ಒಳ್ಳೆಯದು. ಅದೇ ನಮ್ಮ ಕರ್ತವ್ಯವೂ ಸಹ. ಅದು ಹೇಗೆ ಏನೆಂಬುದೆಲ್ಲಾ ನೀವೇ ನೋಡಿ ಕೊಳ್ಳುವಿರಷ್ಟೆ ? " ಎಂದನು.

" ಸರಿ ಪ್ರಭೂ. ಈ ಕ್ಷಣದಿಂದ ನಿಮ್ಮ ಆಜ್ಞೆ ಯಂತೆಯೇ ನಡೆದುಕೊಳ್ಳುತ್ತೇನೆ " ಎಂದು ಮಂತ್ರಿ ರಾಜನಿಗೆ ನಮಸ್ಕರಿಸಿ, ಸೇನಾಧಿಪತಿಯೊಂದಿಗೆ ಹೊರಟನು.

* * *

ಬೆರಗು ಬೆಜ್ಜರಗಳಿಂದ ನದಿಯ ತೀರವನ್ನು ಬಿಟ್ಟು ರಾಜಪ್ರಾಸಾದಕ್ಕೆ ಹಿಂದಿರುಗಿದ ವೀರಸೇನನು ಹೊಸ ಸೇನಾಪತಿಯನ್ನು ಬರಮಾಡಿಸಿ, " ಏನೋಯ್ ಕಪಾಲಕಂಕಾ ! ಹೀಗೆ ಆಕಸ್ಮಾತ್ ನೆರೆ ಬರುವ ಸಂಗತಿ ಮೊದಲೇ ನಮಗೆ ಯಾರೂ ತಿಳಿಸಲಿಲ್ಲ ವೇಕೆ ? ನೀನಾದರೂ ಕೆಲವರನ್ನು ಮುಂದಾಗಿಯೇ



Scanned by CamScanner

"ಇನ್ನೆಷ್ಟು ಕಾಲ ಸಹನೆ ? ಎಲ್ಲಿಂದ ಆಯುಧಗಳ ಶೇಖರಣೆ ?" ಎಂದನು ವೀರಸಿಂಹ ನಿಸ್ಪೃಹತೆಯ ರೋಷಿಕೆಯಲ್ಲಿ.

"ನಮ್ಮ ಹತ್ತಿರ ಧನವಿದ್ದರೆ ಎಷ್ಟು ದೂರದಿಂದ ಲಾದರೂ ಆಯುಧ ತಂದುಕೊಳ್ಳಬಹುದು ಪ್ರಭು ಗಳೇ. ಧನದಿಂದ ಸೈನಿಕರನ್ನೂ ಸೇರಿಸಿಕೊಳ್ಳ ಬಹುದು" ಎಂದನು ಕಪಾಲಕಂಕ.

"ಅದಕ್ಕೆ ಬೇಕಾದಷ್ಟು ಧನವಾದರೂ ನಮ್ಮ ಹತ್ತಿರ ಎಲ್ಲಿದೆ ? ಆ ಶಾಂತಿದೇವನು ಬಾವಿಗಳನ್ನು ತೋಡಿಸಿ, ಕಾಡು ಗುಡ್ಡೆಗಳಲ್ಲಿ ದಾರಿ ಹಾಕಿಸಿ ಪ್ರಜೆ ಗಳು ಉಪಯೋಗಿಸುವ ಕೆಲಸಗಳಿಗೆ ಅಂತ ಖಜಾನೆ ಖಾಲೀ ಮಾಡಿಟ್ಟಿದ್ದಾನೆ. ಈಗ ಎಲ್ಲಿಂದ ತರುವುದು ಧನ ?" ಎಂದನು ವೀರಸಿಂಹ ರೋಷಾಕ್ರೋಶದ ಸಂಕಟದಲ್ಲಿ.

"ಕೇಳಬೇಕು ಪ್ರಭುಗಳು. ಈ ವರ್ಷ ನಮ್ಮ ರಾಜ್ಯದಲ್ಲಿ ಬೆಳೆಗಳೆಲ್ಲ ಬಹು ಚೆನ್ನಾಗಿವೆ. ಎಲ್ಲಿ ನೋಡಿದರೂ ಪೈರುಪಚ್ಚೆಗಳೇ. ನಮ್ಮ ರಾಜ್ಯ ಕ್ಕಿಂತಲೂ ಚಂದ್ರಪುರಿಯಲ್ಲಿ ಬತ್ತಕ್ಕೆ ಐದು ಪಾಲು ಹೆಚ್ಚು ಬೆಲೆ ಬರುತ್ತದೆ. ಉತ್ತಮವಾದ ಕತ್ತಿಗಳಿಗೆ, ಈಟಿಗಳಿಗೆ ಚಂದ್ರಪುರಿ ಹೆಸರಾಗಿದೆಯಷ್ಟೆ ? ಚಂದ್ರ ಪುರಿಯವರಿಗೆ ನಮ್ಮ ಧಾನ್ಯವನ್ನು ಮಾರಿ ಅಲ್ಲಿಂದ ಆಯುಧಗಳನ್ನು ತರಿಸಿಕೊಂಡರಾಯಿತು" ಎಂದನು ಕಪಾಲಕಂಕ.

"ಹೌದು. ಇದು ಸಮಯಕ್ಕೆ ಸರಿಯಾದ ಒಳ್ಳೆಯ ಆಲೋಚನೆ" ಎಂದು ವೀರಸಿಂಹನು ಕಪಾಲಕಂಕನನ್ನು ಮನಸ್ಸಿನಲ್ಲಿಯೇ ಬಹಳವಾಗಿ ಮೆಚ್ಚಿಕೊಂಡು, "ಸಾಮಾನ್ಯ ರೈತರಿಂದ ಬೆಳೆಯಲ್ಲಿ ಅರ್ಧ ಭಾಗವನ್ನೂ, ದೊಡ್ಡ ಭೂಸ್ವಾಮಿಗಳಿಂದ ಬೆಳೆಯಲ್ಲಿ ಮೂರು ಭಾಗಗಳನ್ನೂ ಪ್ರತ್ಯೇಕ ಶಿಸ್ತು ವಸೂಲು ಮಾಡಬೇಕೆಂದು ರಾಜಾಜ್ಞೆಯಾಗಿದೆ ಯೆಂದು ಹೇಳು" ಎಂದು ಆಜ್ಞೆ ಮಾಡಿದನು.



"ಅಪ್ಪಣೆ ಮಹಾಪ್ರಭೂ. ಈ ಶಿಸ್ತು ವಸೂಲನ್ನು ಮೊದಲು ದೊಡ್ಡ ಭೂಮಾಲಿಕರಿಂದಲೇ ಪ್ರಾರಂಭಿ ಸೋಣ. ಈ ದಿನವೇ ರೈತರ ರಾಜನಂಥಾ ರಘು ನಾಥನ ಮನೆಗೇ ಭಟರನ್ನು ಕಳುಹಿಸುತ್ತೇನೆ" ಎಂದು ಹೇಳಿ ಕಪಾಲಕಂಕನು ಅಲ್ಲಿಂದ ಹೊರಟನು.

ರಾಮಾವರದಲ್ಲಿ ರಘುನಾಥನು ಧರ್ಮಬುದ್ಧಿ ಯುಳ್ಳ ದೊಡ್ಡ ಭೂಸ್ವಾಮಿಯಾಗಿದ್ದನು. ಅವನ ಕೈಕೆಳಗೆ ಅನೇಕ ರೈತರು ಕೆಲಸ ಮಾಡುತ್ತಿದ್ದರು. ರಾಮಾವರದ ಪ್ರಜೆಗಳು ಅಗತ್ಯಬಿದ್ದಾಗ ರಘುನಾಥ ನನ್ನು ಕೇಳಿ ಧಾನ್ಯ ತೆಗೆದುಕೊಂಡು ಹೋಗಿ, ಸಾಧ್ಯ ವಾದಾಗ, ಹಣವನ್ನೋ ಅಥವಾ ಇತರ ವಸ್ತು ಗಳನ್ನೋ ಹಿಂದಿರುಗಿ ಸಲ್ಲಿಸುತ್ತಿದ್ದರು. ಈ ಪದ್ಧತಿ ರಘುನಾಥನ ತಂದೆಯ ಕಾಲದಿಂದಲೇ ನಡೆದು ಕೊಂಡಿತ್ತು.

ರಾಜಭಟರು ರಘುನಾಥನ ಮನೆಗೆ ಬಂದಾಗ ಸುಮಾರು ಮಧ್ಯಾಹ್ನದ ಹೊತ್ತು, ನೂರಾರು ಮಂದಿ



Scanned by CamScanner



ಗ್ರಾಮಸ್ಥರು ಕೈಯಲ್ಲಿ ಬುಟ್ಟಿಗಳನ್ನೂ ಚೀಲಗಳನ್ನೂ ಹಿಡಿದುಕೊಂಡು ನಿಂತಿದ್ದರು. ಆಳುಗಳು ಉಗ್ರಾಣದೊಳಗಿನಿಂದ ಧಾನ್ಯದ ಚೀಲಗಳನ್ನು ಎತ್ತಿ ಹೊರಗಿ ತಂದಿಟ್ಟು ಬಿಚ್ಚಿಕೊಂಡಿದ್ದರು.

ಇಪ್ಪತ್ತು ಮಂದಿ ಭಟರನ್ನು ಜತೆಗಿಟ್ಟುಕೊಂಡು ಅಲ್ಲಿಗೆ ಬಂದ ಯುವಕನಾದ ಒಬ್ಬ ರಾಜಾಧಿಕಾರಿ ಕುದುರೆಯಲ್ಲಿ ಬಂದು ಅಲ್ಲಿ ಇಳಿದುದನ್ನು ನೋಡಿ ಎಲ್ಲರೂ ಬೆರಗಾದರು. ಅವನ ಹಿಂದೆಯೇ ಐವತ್ತು ಎತ್ತಿನ ಗಾಡಿಗಳೂ ಬಂದಿದ್ದುವು!

ಯುವಕನಾದ ಆ ರಾಜಾಧಿಕಾರಿ ವಿಶಾಲವಾದ ಅಂಗಳದ ಮಧ್ಯಕ್ಕೆ ಹೋಗಿ ನಿಂತು, ಅಧಿಕಾರ ದರ್ಪದ ಧ್ವನಿಯಿಂದ, "ರಘುನಾಥರು ಇಲ್ಲಿ ಸಂಗ್ರಹವಾಗಿರುವ ಧಾನ್ಯಗಳಲ್ಲಿ ನಾಲ್ಕನೇ ಮೂರಂಶ ಮಹಾರಾಜರಿಗೆ ಕೊಡತಕ್ಕದ್ದು!" ಎಂದನು.

ಮುಂದೆ ಬಂದ ರಘುನಾಥನು "ಏತಕ್ಕಾಗಿ?" ಎಂದು ಕೇಳಿದನು.

"ಶಾಸನದ ಪ್ರಕಾರ ನೀವು ರಾಜರಿಗೆ ಕೊಡಬೇಕಾದ ತೆರಿಗೆ!" ಎಂದು ಹೇಳಿದನು ಅಧಿಕಾರಿ.

"ನಾನು ಕಟ್ಟಬೇಕಾದ ತೆರಿಗೆ ಪೂರ್ತಿ ಸಲ್ಲಿಸಿಯಾಗಿದೆ. ಬಾಕಿಯೇನೂ ಇಲ್ಲ" ಎಂದನು ರಘುನಾಥ.

"ಇದು ಪ್ರತ್ಯೇಕ ಶಿಸ್ತಿನ ತೆರಿಗೆ. ನಿಮ್ಮಂಥವರಿಗೆಲ್ಲಾ ಅನ್ವಯಿಸುವಂಥಾದ್ದು. ಈ ಧಾನ್ಯಗಳನ್ನೆಲ್ಲಾ ಚಂದ್ರಪುರಿಗೆ ಸಾಗಿಸಬೇಕೆಂದು ರಾಜಾಜ್ಞೆ."

"ಹಾಗಾದರೆ ಈ ಧಾನ್ಯಗಳನ್ನು ನಂಬಿಕೊಂಡಿರುವ ಈ ಊರಿನವರ ಗತಿಯೇನು?" ಎಂದು ರಘುನಾಥನು ಕೇಳಿದನು.

"ಈ ಧಾನ್ಯಗಳನ್ನು ನಂಬಿಕೊಂಡಿರಲು ಅವರಿಗೆ ಯಾರು ಹೇಳಿದರು? ಅವರ ಕರ್ಮಕ್ಕೆ ನಾವು ಜವಾಬುದಾರರಲ್ಲ!" ಎಂದನು ರಾಜಾಧಿಕಾರಿ.

ಅಧಿಕಾರಿಯ ಹಿಂದೆ ಬಂದಿದ್ದ ರಾಜಭಟರು ಆಗಲೇ ಚಲಿಸತೊಡಗಿ, ಕೈಗಳಲ್ಲಿ ಕೊರಡೆಗಳನ್ನು ತಿರುಗಿಸುತ್ತ, ಗಾಡಿಯಾಳುಗಳ ಕಡೆಗೆ ತಿರುಗಿ, "ಅಲ್ಲಿ ಕಾಣುವ ಧಾನ್ಯದ ಚೀಲಗಳನ್ನೆಲ್ಲಾ ಗಾಡಿಗಳಿಗೇರಿಸಿರಿ" ಎಂದು ದರ್ಪದಲ್ಲಿ ಹೇಳಿದರು.

"ನಮ್ಮ ಹೊಟ್ಟೆಗೆ ಹೊಡೀಬೇಡಿರೋ..." ಎಂದು ಗ್ರಾಮವಾಸಿಗಳು ಎಷ್ಟು ಬೇಡಿ ಗೋಳಾಡಿದರೂ ಪ್ರಯೋಜನವಿರಲಿಲ್ಲ. ಕಡೆಗೆ ಪೆಟ್ಟುಗಳಿಗೆ ಹೆದರಿದ ಗ್ರಾಮಸ್ಥರೇ ಧಾನ್ಯದ ಚೀಲಗಳನ್ನು ಹೊತ್ತು ತಂದು ಗಾಡಿಗಳಿಗೆ ಏರಿಸಿದರು. ಅವರೇ ಉಗ್ರಾಣದ ಧಾನ್ಯಗಳನ್ನು ರಾಶಿಹಾಕಿ ಚೀಲಗಳಿಗೆ ತುಂಬಿಸಿ ಕೊಡುವಂತೆಯೂ ಆಯಿತು. ಹಾಗೆ ಧಾನ್ಯಗಳ ಚೀಲಗಳು ಗಾಡಿಗಳಲ್ಲಿ ತುಂಬುವಾಗ ಸಾಯಂಕಾಲವಾಯಿತು.

ಗಾಡಿಗಳು ಪಶ್ಚಿಮ ದಿಕ್ಕಿನ ಕಡೆಗೆ ಸಾಗತೊಡಗಿದುವು. ಗ್ರಾಮಸ್ಥರೆಲ್ಲಾ ತಲೆ ತಗ್ಗಿಸಿಕೊಂಡು ಆ ಗಾಡಿಗಳ ಹಿಂದೆ ಸ್ವಲ್ಪ ದೂರ ನಡೆದರು. ಆ ದೃಶ್ಯವನ್ನು ನೋಡಿ ಅಧಿಕಾರಿ ತನ್ನೊಳಗೇ



Scanned by CamScanner

ಉಬ್ಬಿಕೊಳ್ಳುತ್ತಿದ್ದನು. ಆಗ ಯಾಕೋ ಥಕ್ಕನೆ ಅವನಿಗೊಂದು ಅನುಮಾನವೆದ್ದಿತು. ಗ್ರಾಮಸ್ಥರೆಲ್ಲಾ ಗಾಡಿಗಳ ಹಿಂದೆ ನಡೆಯುತ್ತಾರೇಕೆ? - ಇದರಲ್ಲಿ ಯುವಕ ಜನರ ತಂತ್ರವೇನಾದರೂ ಇದ್ದೀತೆ? ಹಿಂದೆ ನಿಂತವರು ಹೋಗಲಾಗಿ ನಡೆಯುವವರಲ್ಲಿ ಹೆಚ್ಚಿನವರು ಗಟ್ಟಿಮುಟ್ಟಾದ ಯುವಕರೇ!

ಅನುಮಾನವೆದ್ದ ಕೂಡಲೇ ಅವನು ಕುದುರೆಯನ್ನು ತಿರುಗಿಸಿ, ಕತ್ತಿಯನ್ನು ಝಳಪಿಸುತ್ತ, "ಇನ್ನು ನಿಮಗೇನೂ ಕೆಲಸವಿಲ್ಲ. ನೀವೆಲ್ಲಾ ಹಿಂದೆ ಹೋಗಿಬಿಡಿರಿ. ನಡೆಯಿರಿ!" ಎಂದು ಕೂಗಿ ಹೇಳಿದನು.

ಆ ಸಮಯಕ್ಕೆ ಗಾಡಿಗಳೆಲ್ಲಾ ಒಂದು ಗುಡ್ಡದ ಕಣಿವೆಯನ್ನು ಸಮೀಪಿಸಿದುವು. ಗ್ರಾಮಸ್ಥರ ಗುಂಪಿನಲ್ಲಿದ್ದ ಯುವಕನೊಬ್ಬನು "ಹೇಯ್" ಎಂದು ಕೂಗಿದನು. ಮರುಕ್ಷಣವೇ ಕುದುರೆಯ ಮೇಲಿದ್ದ ರಾಜಾಧಿಕಾರಿಯ ಕುತ್ತಿಗೆಗೆ ದೂರದಿಂದ ಬಿಸುಡಲ್ಪಟ್ಟ ಹಗ್ಗದ ಉರುಳು ಅವನಿಗೆ ಗೊತ್ತಾಗುವುದರೊಳಗೇ ಕೊರಳಿಗೆ ಬಿಗಿದುಕೊಂಡಿತು. ಅವನು ಹಿಡಿದ ಕತ್ತಿಯೊಂದಿಗೆ ಕುದುರೆಯ ಮೇಲಿನಿಂದ ಧೊಪ್ಪನೆ ಬಿದ್ದನು. ಪಕ್ಕದಲ್ಲಿರುವ ಗುಡ್ಡದ ಬಂಡೆಯ ಮೇಲಿನಿಂದ ಹಗ್ಗದ ಉರುಳು ಬಿಸುಟ ಯುವಕನು, ಮತ್ತೆ ಕೆಲವು ಯುವಕರೊಂದಿಗೆ ವೇಗವಾಗಿ ಕೆಳಗೆ ಬಂದನು. ಅವರು ರಾಜಾಧಿಕಾರಿಯನ್ನೂ, ರಾಜಭಟರನ್ನೂ ಕಟ್ಟಿ ಹಿಂಗಟ್ಟು ಹಾಕಿ ಹಿಡಿದರು. ಹಿಡಿಯುತ್ತಾ "ಹೆದರಬೇಡಿ. ನಿಮಗೇನೂ ಮಾಡುವುದಿಲ್ಲ" ಎಂದು ಅಭಯದ ಮಾತು ಹೇಳಿದರು.

ಆಮೇಲೆ ಆ ಯುವಕನು ಗ್ರಾಮವಾಸಿಗಳೊಂದಿಗೆ, "ಚೀಲಗಳನ್ನು ಹಂಚಿ ತೆಗೆದುಕೊಂಡು ಹೋಗಿರಿ. ವೀರಸಿಂಹನ ಭಟರು ನಿಮಗೇನೂ ಮಾಡುವುದಿಲ್ಲ. ನಿಶ್ಚಿಂತೆಯಿಂದ ನಿಮ್ಮ ಮನೆಗಳಿಗೆ ಹೋಗಿರಿ" ಎಂದನು.

ಗ್ರಾಮಸ್ಥರು ಧಾನ್ಯಗಳ ಚೀಲದೊಂದಿಗೆ ಸಂತೋಷವಾಗಿ ಹಿಂದಿರುಗಿದ ಮೇಲೆ, ಆ ವೀರ ಯುವಕನು ರಾಜಭಟರನ್ನೆಲ್ಲಾ ಮರಕ್ಕೆ ಕಟ್ಟಿ ಹಾಕಿಸಿ, "ನೀವು ಇಲ್ಲಿ ಸಿಕ್ಕಿಕೊಂಡ ಸಂಗತಿಯನ್ನು ನಿಮ್ಮ ನಾಯಕನಿಗೆ ತಿಳಿಸಿ ನಿಮ್ಮನ್ನು ಬಿಡಿಸಲು ಏರ್ಪಾಡು ಮಾಡುತ್ತೇನೆ. ಈ ರಾಜ್ಯದೊಳಗಿನಿಂದ ಒಂದು ಕಾಳು ಧಾನ್ಯವೂ ನೆರೆ ರಾಜ್ಯಕ್ಕೆ ಹೋಗಲು ಅನುಮತಿ ಕೊಡಲಾರೆನೆಂದು ನಿಮ್ಮ ನಾಯಕನಾದ ಕಪಾಲಕಂಕನಿಗೆ ಹೇಳಿರಿ" ಎಂದನು. ಹಾಗೆ ಬಂಧಿಸಲ್ಪಟ್ಟವರಲ್ಲಿ ರಾಜಾಧಿಕಾರಿ ಕೂಡಾ ಇದ್ದನು. ಇಷ್ಟೆಲ್ಲಾ ಮಾಡಿದವನು ವಸಂತನೇ. ಆರಿಸಲ್ಪಟ್ಟಂತಹ ಈ ಸಾಹಸೀ ಯುವಕ ವೃಂದಕ್ಕೆ ಅವನೇ ನಾಯಕ."

—(ಇನ್ನೂ ಇದೆ)



Scanned by CamScanner




೧೦

[ ಅಮೃತಪುರಿಯ ಮೇಲೆ ದಂಡೆತ್ತಿದ ವೀರಸಿಂಹನ ಸೇನೆಗಳು ಥಕ್ಕನೆ ಎದ್ದು ಬಂದ ಸುಮತೀ ನದಿಯ ಪ್ರವಾಹದ ಸೆಳೆತದಲ್ಲಿ ಸಿಕ್ಕಿ ಅಡಿಮೇಲಾಗಿ ಹೋದುವು. ಮತ್ತೆ ಹೊಸತಾಗಿ ಸೈನ್ಯವನ್ನು ಸೇರಿಸಿಕೊಳ್ಳಲು ತಲೆಹಾಕಿದ ವೀರಸಿಂಹನು, ಆಯುಧ ಶೇಖರಣೆಯ ಧನಕ್ಕಾಗಿ ರೈತ ಪ್ರಮುಖರಿಂದ ಧಾನ್ಯಗಳನ್ನು ವಸೂಲು ಮಾಡಲು ಕಪಾಲಕಂಕನಿಗೆ ಆಜ್ಞೆಯಿತ್ತನು. ಆದರೂ ಪ್ರಜೆಗಳು ಶಾಂತರಾಗಲಿಲ್ಲ. ಹೀಗಿರುವಾಗ—]

ಅತ್ತ ಅರಣ್ಯದಲ್ಲಿ ವಸಂತದ ಆಗಮನದಿಂದಾಗಿ ಹೊಚ್ಚ ಹೊಸ ಅಂದಚೆಂದಗಳು ಕಾಣತೊಡಗಿದುವು. ಹಚ್ಚ ಹಸಿರಾದ ಗಿಡಮರ ಬಳ್ಳಿಗಳೆಲ್ಲಾ ಬಣ್ಣ ಬಣ್ಣಗಳ ಹೂಗಳಿಂದ ಸುತ್ತಲೂ ರಂಗೇರಿ ರಂಜಿಸತೊಡಗಿದುವು. ಹಕ್ಕಿಪಕ್ಕಿಗಳ ಉತ್ಸಾಹದ ಕಲರವಗಳೆಡೆಯಲ್ಲಿ ಕೋಗಿಲೆಗಳ ಕುಹೂ ನಿನಾದವು ಕರ್ಣಪರ್ವವನ್ನು ಸೃಷ್ಟಿಸಿತು. ಇವೆಲ್ಲಕ್ಕೂ ಹಿಮ್ಮೇಳದ ರಾಗಾಲಾಪನೆಯಾಗಿ ರಸದುಂಬಿಗಳ ಝೇಂಕಾರದ ಇಂಪು. ಹೀಗೆ ಋತುರಾಜ ಕುಸುಮಾಕರನ ಒಡ್ಡೋಲಗವು ಪ್ರಾರಂಭವಾಯಿತು ಅರಣ್ಯದಲ್ಲಿ.

ಶಾಂತಿಪುರದ ಯುವರಾಜನು ಅಡವಿಯಲ್ಲಿ ಕಾಲಿಟ್ಟಾಗಿನಿಂದಲೂ ವಸಂತರಾಜನಿಗೆ ಇನ್ನಷ್ಟು ಶೋಭೆಯುಂಟಾಯಿತು. ವನಸೌಂದರ್ಯದ ಹೊರತು ಬೇರೇನನ್ನೂ ಕಂಡರಿಯದ ಯುವರಾಜನಿಗೆ ಈಗ ಅದೇನು ? ಇದೇನು ? ಎಂಬ ಜಿಜ್ಞಾಸೆಯು ಪ್ರಶ್ನೆ ಹೊರಡುವ ಆರು ವಯಸ್ಸು ತುಂಬಿ ಬಂದಿತ್ತು. ಜಯಾನಂದ ಮುನಿ ಅವನಿಗೆ ಸಂದೀಪನೆಂದು ನಾಮಕರಣ ಮಾಡಿದ್ದನು.

ಅಡವಿಯೊಳಗಿನ ಪಕ್ಷಿಗಳನ್ನೂ ಪ್ರಾಣಿಗಳನ್ನೂ ತನ್ನ ಕಣ್ಣು ಸನ್ನೆಯಿಂದ ನಿರ್ದೇಶಿಸುವ ಅದ್ಭುತ



Scanned by CamScanner




ಶಕ್ತಿ ಜಯಾನಂದ ಮುನಿಗೆ ಇದ್ದುದರಿಂದ, ಅವುಗಳ ಸಹಾಯದಿಂದ ಅವನು ತನ್ನ ಮುಖ್ಯವಾದ ಕಾರ್ಯಗಳನ್ನು ಮಾಡಿಸಿಕೊಳ್ಳುತ್ತಿದ್ದನು. ಅಂತಲೇ ಅವನ ಆಶ್ರಯದಲ್ಲಿರುವವರಿಗೆ ಯಾವ ಪಶುಪಕ್ಷಿಗಳಿಂದಲೂ ಕೇಡು ಬರುತ್ತಿರಲಿಲ್ಲ.

ಈ ಶಕ್ತಿ ಅವನಿಗಿರುವ ಸಂಗತಿ ಅನೇಕರಿಗೆ ತಿಳಿಯದು. ಹೊರಗಿನವರಿಗಂತೂ ಅಸಲೇ ತಿಳಿಯದು. ಮುನಿ ತಾನು ಬೆಳೆಸುವ ಸಂದೀಪ ಕುಮಾರನಿಗೆ ತನ್ನ ದೃಷ್ಟಿ ಶಕ್ತಿಯನ್ನು ಪ್ರಸಾದಿಸುವ ಹಾಗೆ ಕಲಿಸತೊಡಗಿದನು. ಅಭ್ಯಾಸ ಮಾಡಿದರೆ ಮನುಷ್ಯನಿಂದಾಗದ ಕೆಲಸವಿಲ್ಲವೆಂದು ತಿಳಿದವರು ಹೇಳುತ್ತಾರಷ್ಟೆ ? ಅದು ನಿಜವೆಂಬಂತೆ ಸಂದೀಪ ಕುಮಾರನು ಪ್ರಾಣಿ ಪಕ್ಷಿಗಳೊಂದಿಗೆ ಸೈಗೆ, ಕಣ್ಣು ಸನ್ನೆಗಳಿಂದ, ಸ್ವರಭೇದಗಳಿಂದ ತನಗೆ ಬೇಕಾದ ಹಾಗೆ ಸಂಪ್ರತಿಸುತ್ತ ಆಡತೊಡಗಿದನು. ಅವುಗಳೆಲ್ಲಾ ಅವನ ಮಿತ್ರರಾದುವು.

ಅಂತಹ ಅವನ ಮಿತ್ರರಲ್ಲಿ ಕರೀಂದ್ರವೆಂಬ ಆನೆ ದೊಡ್ಡ ದೊಡ್ಡ ದಂತಗಳಿಂದ ಸಾರ್ಥಕನಾಮದ್ದಾಗಿತ್ತು. ಅದು ಅಡವಿಯೊಳಗಿನ ಎಲ್ಲಾ ಆನೆಗಳಿಗೂ ನಾಯಕತ್ವದಲ್ಲಿ ವ್ಯವಹರಿಸುತ್ತಿತ್ತು. ಅಂತಹ ಕರೀಂದ್ರವು ದಿನಾ ತಪ್ಪದೆ ಸಂದೀಪಕುಮಾರನ ಹತ್ತಿರ ಬರುತ್ತಿತ್ತು. ಅವನೊಂದಿಗೆ ಆಡುವುದೆಂದರೆ ಅದಕ್ಕೊಂದು ಪ್ರತ್ಯೇಕ ಸಂತೋಷ. ಸಂದೀಪನು ಅದರ ಮೇಲೇರಿ ಪ್ರಯಾಣ ಮಾಡಲು ಕೈ ಎತ್ತಿದರೆ ಸಾಕು, ಅದು ಸೊಂಡಿಲು ಬಳಸಿ ಅವನನ್ನು ಎತ್ತಿ ತನ್ನ ಬೆನ್ನಿನ ಮೇಲೆ ಕೂಡಿಸಿಕೊಳ್ಳುತ್ತಿತ್ತು. ಅವನು ಬೀಳದಂತೆ ಕೂಡಲೇ ಒಂದು ಕೋತಿ ಅವನನ್ನು ಹಿಡಿದುಕೊಂಡು ಆನೆಯ ಮೇಲೆ ಕೂಡುತ್ತಿತ್ತು. ಮಲ್ಲಿ ಎಂಬ ಗಿಳಿ ಅವನ ಮೇಲಿಂದಾಗಿ ಮರದಿಂದ ಮರಕ್ಕೆ ಜಿಗಿಯುತ್ತ ಕೀಚುಕೀಚೆಂದು ಅವನು ಹೋಗುವ ಮಾರ್ಗವನ್ನು ಸೂಚಿಸುತ್ತಾ ಮುಂಭಾಗದಲ್ಲಿ ಹಾರುತ್ತಿತ್ತು.

ರಾಜಕುಮಾರನು ಅರಣ್ಯಕ್ಕೆ ಬಂದಂದಿನಿಂದಲೂ ಮುನಿಯ ಆಜ್ಞಾನುಸಾರವಾಗಿ, ಅವನ ರಕ್ಷಣೆಯ ಬಾಧ್ಯತೆಯನ್ನು ವಹಿಸುವ ಭಲ್ಲೂಕೀ ಎಂಬ ಕರಡಿ, ನೆಲದಡಿಯಲ್ಲಿರುವ ಸಿಹಿಯೂ ಸುವಾಸನೆಯೂ ಆದ ಗಡ್ಡೆ ಗೆಣಸುಗಳನ್ನು ಆರಿಸಿ ಅವನಿಗೆ ಉಣ್ಣಿಸುತ್ತಿತ್ತು. ಅರಣ್ಯದ ಪಕ್ಕದಲ್ಲಿದ್ದ ಹೊಲಗಳಿಂದ ಕಬ್ಬಿನ ಜಲ್ಲೆಗಳನ್ನು ಕೂಡಾ ತಂದು ಕೊಡುತ್ತಿತ್ತು. ಇನ್ನು ಎರಡು ಕೋತಿಗಳಂತೂ ಒಂದರೊಡನೆ ಒಂದು ಸ್ಪರ್ಧೆಗೆ ಬಿದ್ದಂತೆ ಯುವರಾಜನಿಗೆ ಮಾವು, ಜಾಮ, ಬಾಳೆ ಮುಂತಾದ ಯುವರಾಜನಿಗೆ ಇಷ್ಟವಾದ ಹಣ್ಣುಗಳನ್ನು ತಂದು ಕೊಡುತ್ತಿದ್ದುವು. ಹೀಗೆ ಪ್ರಕೃತಿಸಿದ್ಧ ರಾಜಭೋಜನದಲ್ಲೇ ಬೆಳೆಯುತ್ತಿದ್ದನು ಯುವರಾಜ.

ಅಷ್ಟೇ ಅಲ್ಲದೆ ಅವನು ಆಗಾಗ ಹುಲಿಮರಿಗಳೊಂದಿಗೆ ಕಣ್ಣುಮುಚ್ಚಾಲೆಯಾಡುವನು. ಹಾಸಿಗೆ



Scanned by CamScanner



ಯಂತಹ ಹಸಿ ಹುಲ್ಲು ನೆಲದಲ್ಲಿ ಅವುಗಳೊಂದಿಗೆ ಕುಸ್ತಿ ಹಿಡಿಯುತ್ತ ಲಾಗ ಹಾಕುವನು. ಕೊಂಬೆಗಳಲ್ಲಿ ಅವನನ್ನು ಓಲಾಡಿಸುವುದೆಂದರೆ ಕೋತಿಗಳಿಗೆ ಬಲು ಖುಷಿ.

ದಿನಾ ಬೆಳಗಾದ ಕೂಡಲೇ ಸಂದೀಪಕುಮಾರನು ಹರಿಯುವ ನೀರೋಳಿಯಲ್ಲಿ ಸ್ನಾನಮಾಡಿ ಗುರು ಮುನಿಯ ಮುಂದೆ ಬಂದು ಭಕ್ತಿಯಿಂದ ಕುಳಿತುಕೊಳ್ಳುವನು.

ಅದು ಅವನ ವಿದ್ಯಾಭ್ಯಾಸದ ವೇಳೆ. ಗುರು ಜಯಾನಂದ ಮುನಿಯು ಅವನಿಗೆ ಪ್ರಾರ್ಥನೆಯ ಶ್ಲೋಕಗಳನ್ನೂ, ದೈವಜ್ಞಾನದ ಧ್ಯಾನ ಪದ್ಧತಿಯನ್ನೂ ಕಲಿಸುವನು. ಆಮೇಲೆ ಸ್ವಲ್ಪ ಹೊತ್ತು ಬರೆಯುವುದನ್ನೂ ಓದುವುದನ್ನೂ ಕಲಿಸುವನು. ಆಮೇಲೆ ಸ್ವಲ್ಪ ಹೊತ್ತು ಗುರುವಿನ ಹಿಂದೆ ಅರಣ್ಯದೊಳಗೆ ಸಂಚಾರ. ಆಗ ಜಯಾನಂದ ಮುನಿ ಬಗೆಬಗೆಯ ಮರಗಳ, ಗಿಡಗಳ, ಬಳ್ಳಿಗಳ ವಿಶೇಷತೆಗಳನ್ನು ಹೇಳುತ್ತ ತೋರಿಸುತ್ತ, ಅವುಗಳ ಹೆಸರು ಲಕ್ಷಣ ವಿಶೇಷಗಳನ್ನು ವಿವರಿಸುವನು.

ಮುಖ್ಯವಾಗಿ "ಅಪ್ಪಾ, ನಾವು ಈ ಅಂದವಾದ ಪ್ರಕೃತಿಯನ್ನು ಗೌರವಿಸಬೇಕು. ಮನುಷ್ಯನು ಹುಟ್ಟುವುದಕ್ಕೆ ಮೊದಲೇ ಪ್ರಕೃತಿ ಹುಟ್ಟಿರುತ್ತದೆ. ಭಗವಂತನ ಅದ್ಭುತಗಳನ್ನು ನೋಡುವುದಕ್ಕೆ ನಾವು ಎಲ್ಲೆಲ್ಲಿಗೋ ಹೋಗಬೇಕಾಗಿಲ್ಲ. ಪ್ರಕೃತಿಯನ್ನು ಮನಸ್ಸಿಟ್ಟು ಪರಿಶೀಲಿಸಿ ನೋಡಿದರೆ, ಅಡಿಗಡಿಗೂ ಅದ್ಭುತಗಳು ಕಾಣುತ್ತವೆ. ಪ್ರತಿ ಗಿಡವೂ ಪ್ರತಿ ಕ್ಷಣವೂ ಅದ್ಭುತವನ್ನು ನಮಗೆ ತೋರಿಸುತ್ತದೆ. ಅಲ್ಲಿ ನೋಡು, ಅದು ಚಂಪಕ ವೃಕ್ಷ. ಇದು ಮಲ್ಲಿಗೆ ಬಳ್ಳಿ. ಇವೆರಡೂ ಭೂಮಿಯಿಂದಲೇ ಹುಟ್ಟಿವೆ, ಎರಡೂ ಭೂಮಿಯಲ್ಲಿ ಲಭಿಸುವ ಗಾಳಿಯನ್ನೂ, ಸೂರ್ಯರಶ್ಮಿಯನ್ನೂ ಉಪಯೋಗಿಸಿಕೊಳ್ಳುತ್ತವೆ. ಒಂದೇ ಮಣ್ಣಿನಲ್ಲಿ ಹುಟ್ಟಿದರೂ ಒಂದೇ ಗಾಳಿ, ಸೂರ್ಯಕಿರಣಗಳನ್ನು ಉಪಯೋಗಿಸಿಕೊಂಡರೂ ಬೇರೆ ಬೇರೆ ಗುಣ ವಿಶೇಷಗಳನ್ನು ಹೊಂದಿವೆ. ನಮಗಿಂತ ಮೊದಲು ಹುಟ್ಟಿದ ಅವುಗಳ ಮಕ್ಕಳು ನಾವು. ಅಂದರೆ ಮನುಷ್ಯರು ಭೂಮಾತೆಯ ಮೊಮ್ಮಕ್ಕಳಾದೆವು. ಮರಗಿಡ ಬಳ್ಳಿಗಳಲ್ಲಿ ಬೇರೆ ಬೇರೆ ಬಗೆಯ ಹೂ ಹಣ್ಣು ಬಣ್ಣ ಪರಿಮಳಗಳಿರುವಂತೆ ಮನುಷ್ಯರಲ್ಲಿಯೂ ಇದೆ. ಮನಸ್ಸಿಟ್ಟು ಪರಿಶೀಲಿಸಿದರಷ್ಟೇ ಇವೆಲ್ಲಾ ಅರ್ಥವಾಗುತ್ತವೆ. ಒಂದೇ ಮಣ್ಣಿನಲ್ಲಿ ಅಕ್ಕಪಕ್ಕಗಳಲ್ಲೇ ಹುಟ್ಟಿದ ಮಾವಿನ ಮರವೂ, ಹಲಸಿನ ಮರವೂ ಎಷ್ಟು ವ್ಯತ್ಯಾಸವಾದ ಹಣ್ಣುಗಳನ್ನು ಕೊಡುತ್ತವೆ! ಇದಕ್ಕಿಂತ ಹೆಚ್ಚಿನ ಅದ್ಭುತವೇನಿದೆ ಹೇಳು!" ಎಂದು ವಿವರಿಸುತ್ತಿದ್ದನು ಜಯಾನಂದ ಮುನಿ.

ಸಂದೀಪಕುಮಾರನು ಗುರುವಿನ ಮಾತನ್ನು ಏಕಾಗ್ರಚಿತ್ತದಿಂದ ಕೇಳುತ್ತಿದ್ದನು. ಆದುದರಿಂದ ಅವನು ಪ್ರಕೃತಿ ದೃಶ್ಯವನ್ನು ನೋಡುವುದರಲ್ಲಿ



Scanned by CamScanner

ಅತ್ಯಾನಂದಪಡತೊಡಗಿದನು. ಆಗ ಹೊತ್ತು ಹೋಗುವುದೇ ಅವನಿಗೆ ತಿಳಿಯುತ್ತಿರಲಿಲ್ಲ.

"ಇನ್ನೊಂದು ವಿಷಯ ಗಮನಿಸಿದಿಯಾ? ಈ ಮರಗಳು ನಮಗೆ ಹಣ್ಣುಗಳನ್ನು ಕೊಡುತ್ತವೆ. ಅದಕ್ಕೆ ಪ್ರತಿಫಲವಾಗಿ ಅವು ನಮ್ಮಿಂದ ಪ್ರತಿಫಲ ವನ್ನು ಆಶಿಸುತ್ತವೆಯೆ? ಇಲ್ಲವಷ್ಟೆ? ಒಬ್ಬನಿಗೆ ಕೊಡುವುದರಲ್ಲಿಯೂ, ಒಬ್ಬನನ್ನು ಆನಂದಪಡಿಸು ವುದರಲ್ಲಿಯೂ ಅವುಗಳಿಗೆ ಆನಂದವಷ್ಟೇ ಪ್ರತಿಫಲ ವಾಗಿದೆ. ಪರೋಪಕಾರ ಮಾಡುವುದರಲ್ಲಿಯೂ ಮನುಷ್ಯರು ಇಂತಹ ಆನಂದವನ್ನು ಹೊಂದು ವಂತಾಗಬೇಕು. ಎಲ್ಲರೂ ಹಾಗಾಗದಿದ್ದರೂ ನೀನು ಆಗುವಿಯೆಂದು ನನಗೆ ಗೊತ್ತು" ಎನ್ನುತ್ತಿದ್ದನು ಜಯಾನಂದ ಮುನಿ.

ಹೀಗೆ ರಾಜಧಾನಿಗೆ ದೂರವಾಗಿ ಅರಣ್ಯದೊಳಗಿನ ಪ್ರಶಾಂತ ವಾತಾವರಣದಲ್ಲಿ ಜಯಾನಂದ ಮುನಿಯ ತಣ್ಣಗಿನ ನೆರಳಿನಲ್ಲಿ ಬೆಳೆಯುತ್ತಿದ್ದನು ಯುವರಾಜ!

ಗುರು ಮುನಿ ವಿವರಿಸಿದ ಕಥೆಯೊಳಗಿನ ರಾಮ, ಕೃಷ್ಣ, ಧ್ರುವ, ನಚಿಕೇತ ಮೊದಲಾದವರೆಲ್ಲರಿಗೂ ತಾಯಿ ತಂದೆಯರಿದ್ದರಷ್ಟೆ? ಹಾಗಿರುವಾಗ ತನಗೆ ಮಾತ್ರ ತಾಯಿ ತಂದೆಯರು ಏಕಿಲ್ಲ? ಬೆಳೆಯು ತ್ತಿರುವ ಯುವರಾಜನಿಗೆ ಇದೊಂದು ಅನುಮಾನ ಬಂದಿತು. ಅವನ ಬೆಳವಣಿಗೆಯೊಂದಿಗೆ ಅದೂ ಬೆಳೆದುದರಿಂದ ಒಂದು ದಿನ ಅವನು ಗುರುವನ್ನು ನೋಡಿ "ನನ್ನ ತಾಯಿ ತಂದೆಯರು ಯಾರು?" ಎಂದು ಕೇಳುವಷ್ಟರ ಮಟ್ಟಿಗೆ ಬಂದನು.

"ಒಂದು ಮಗುವಿಗೆ ತಾಯಿ ತಂದೆಯರ ಆಗತ್ಯ ಎಲ್ಲಿವರೆಗೆ ಗೊತ್ತಿದೆಯಾ? ದೇವನು ತನ್ನ ಪ್ರೇಮ ವನ್ನು ತಾಯಿ ತಂದೆಯರ ಮೂಲಕವಾಗಿ ಮಗುವಿಗೆ ತಲಪಿಸುತ್ತಾನೆ. ನೀನು ಎಲ್ಲರ ಹಾಗಿನವನಲ್ಲವಪ್ಪಾ, ಬಹಳ ದೊಡ್ಡವನು. ಆದುದರಿಂದ ನಿನಗೆ ಮಧ್ಯ ವರ್ತಿ ಇಲ್ಲದೆಯೇ ದೇವನ ಪ್ರೇಮ ಲಭಿಸಿ



ಕೊಂಡಿದೆ" ಎಂದು ಜಯಾನಂದ ಮುನಿ ಅವನ ವಯಸ್ಸಿಗೆ ತಕ್ಕ ಹಾಗೆ ಹೇಳಿ ಸಂತೋಷ ಪಡಿಸಿದನು. ಅದೊಂದು ತನ್ನ ಹೆಚ್ಚಳಿಕೆ ಎನಿಸಿತು ಹುಡುಗನಿಗೆ.

ಅದನ್ನು ಕೇಳಿ ಸಂದೀಪಕುಮಾರನು ಮುಗುಳು ನಗುತ್ತ, "ಗೊತ್ತಾಯಿತು. ನೀವೇ ನನ್ನ ತಂದೆ. ಪ್ರಕೃತಿಯೇ ನನ್ನ ಅಮ್ಮ. ದೇವನು ನನಗೂ ಸಹ ಈ ಮೂಲಕವಾಗಿಯೇ ತನ್ನ ಪ್ರೇಮವನ್ನು ತೋರಿಸುತ್ತಾನೆ!" ಎಂದನು.

ಅದಕ್ಕೆ ಜಯಾನಂದನೂ ನಕ್ಕು, "ನೀನು ತುಂಬಾ ವಿವೇಕವಂತನಪ್ಪಾ. ಪ್ರಹ್ಲಾದನ ಹಾಗೆ ಸುತ್ತಲಿರುವ ಪ್ರತಿ ವಸ್ತುವಿನಲ್ಲಿಯೂ ದೇವನ ಪ್ರೇಮವನ್ನು ಕಾಣುವ ಶಕ್ತಿ ನಿನಗೆ ಬರಲೆಂದು ನಿನ್ನನ್ನು ಆಶೀ ರ್ವಾದ ಮಾಡುತ್ತೇನೆ". ಎಂದನು ಸಂದೀಪನ ತಲೆ ಯನ್ನು ಪೂಸಿ.

* * *



ದುಷ್ಟರಿಗೆ ಸಹಾಯ ಮಾಡುವ ರಾಜದ್ರೋಹಿಗಳಿಗೆ ಸರಿಯಾದ ಶಿಕ್ಷೆ ಕೊಡಬೇಕು. ನಿನ್ನನ್ನು ನೋಡಿದರೆ ಎಲ್ಲರೂ ನಡುಗಬೇಕು" ಎಂದನು ಹಲ್ಲು ಕಡಿಯುತ್ತಾ ವೀರಸಿಂಹ.

ಆ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ಒಂದು ಬಾಣವು ರಿವ್ವನೆ ಸಭಾ ಮಂಟಪದ ಕಿಟಿಕಿಯೊಳಗಿನಿಂದ ತೂರಿ ಹಾರಿ ಬಂದು ಇದಿರಿನಲ್ಲಿದ್ದ ಗೋಡೆಗೆ ಖಂಗನೆ ಬಡಿದು ಕೆಳಗೆ ಬಿತ್ತು! ಬಾಣದ ಬುಡದಲ್ಲಿ ಚಿಕ್ಕದೊಂದು ಬಟ್ಟೆ ಸುತ್ತಿಕೊಂಡಿತ್ತು. ಎಲ್ಲರೂ ಮೈ ಜುಮ್ಮೆನಿಸಲು ಹಾರಿಬಿದ್ದದ್ದು ಹಾಹಾಕಾರ ಮಾಡಿದರು.

ವೀರಸಿಂಹನು ಆಶ್ಚರ್ಯದಿಂದ ಸಿಂಹಾಸನದಿಂದ ಚಂಗನೆ ಹಾರಿ ಎದ್ದನು. ಸಭಿಕರು ಕೂಡಾ ಹಾಗೆಯೇ ನಿಂತು ಸುತ್ತುಮುತ್ತಾ ನೋಡಿದರು!

ಕಪಾಲಕಂಕನು ಆ ಬಾಣವನ್ನು ಎತ್ತಿಕೊಳ್ಳಲು ನಾಲ್ಕಡಿ ತೆಗೆದಾಗ "ಮತಿಗೆಟ್ಟ ಮೂರ್ಖ! ಅಲ್ಲೇ ನಿಲ್ಲು!" ಎಂದು ಕರ್ಕಶ ಕಂಠದಿಂದ ಅರಚಿದನು ವೀರಸಿಂಹ.

"ಮೊದಲು ಅತ್ತ ಓಡಿ ಬಾಣ ಎಸೆದವನು ಯಾರೆಂದು ಹಿಡಿದು ತಾ. ರಾಜಭವನದ ವರೆಗೆ ಬಂದು ಬಾಣ ಬಿಟ್ಟವನನ್ನು ನಮ್ಮ ಭಟರು ಹಿಡಿದು ಬಂಧಿಸಿದರೋ ಇಲ್ಲವೋ ನೋಡು! ಇಲ್ಲದಿದ್ದರೆ ನೀನೇ ಓಡಿ ಅವನನ್ನು ಕಂಡುಹಿಡಿ! ಉಂ, ಓಡು!" ಎಂದು ಕಾಲಪ್ಪಳಿಸಿ ಅಪ್ಪಣೆ ಕೊಟ್ಟನು ವೀರಸಿಂಹ. "ಇವನೊಬ್ಬ ಮರಗಟ್ಟಿ ನಿಲ್ಲುತ್ತಾನೆ! ಯಾತಕ್ಕೂ ಆಗದವ!" ಎಂದು ಗೊಣಗಿಕೊಂಡನು ತನ್ನೊಳಗೆ.

ಕಪಾಲಕಂಕನು ಧೃತಗತಿಯಿಂದ ಕತ್ತಿಯನ್ನು ಹಿರಿದುಕೊಂಡೇ ಹೊರಗೆ ಓಡಿದನು. ಅವನ ಹಿಂದೆಯೇ ಇತರ ಅಧಿಕಾರಿಗಳೂ ಅವರವರ ಆಯುಧಗಳನ್ನು ಹಿಡಿದು ಓಡಿದರು.

ರಾಜಧಾನಿಯಲ್ಲಿ ಸಿಂಹಾಸನದ ಮೇಲೆ ಕುಳಿತು ಕೊಂಡಿದ್ದ ವೀರಸಿಂಹನು ಚಾರರು ತಂದ ವಾರ್ತೆಯನ್ನು ಕೇಳಿ, ಅಗ್ನಿಯ ಮೇಲೆ ಬಿದ್ದ ಗುಗ್ಗುಳದ ಹಾಗೆ ಕೋಪದ ಉರಿಯನ್ನು ಹಾರಿಸಿ, "ಕಪಾಲಕಂಕಾ! ಏನಿದೆಲ್ಲಾ? ಈ ದಿನವೂ ಅದೇ ದುರ್ವಾರ್ತೆಯೋ? ಈ ದಿನ ಕೂಡಾ ನಮ್ಮವರಿಂದ ಧಾನ್ಯವನ್ನೆಲ್ಲಾ ದೋಚಿಕೊಂಡರಂತಲ್ಲಾ? ನಮ್ಮ ಭಟರನ್ನು ಹೀಗೆ ದೋಚಿಕೊಳ್ಳುವ ಆ ದರೋಡೆಕೋರರು ಯಾರು? ಯಾಕೆ ಸುಮ್ಮನೆ ನಿಂತಿದ್ದಿ?" ಎಂದು ಅರಚಿ ಕೇಳಿದನು.

ಕಪಾಲಕಂಕನು ಏನು ಹೇಳಲಿಕ್ಕೂ ತೋರದೆ ತಲೆ ತಗ್ಗಿಸಿ ನಿಂತನು.

"ಸರ್ವಸೇನಾಧೀಶನಾದ ನಿನ್ನ ಅಧಿಕಾರವೆಷ್ಟೆಂದು ನಾನು ವಿವರಿಸಿ ಹೇಳಬೇಕೇನೋ ಮೂಢಾ! ನೀನು ಈ ದರೋಡೆಯವರನ್ನು ಹಿಡಿದು ಬಂಧಿಸಿ ಸಮೂಲವಾಗಿ ನಾಶಮಾಡಿಬಿಡಬೇಕು. ಆ



Scanned by CamScanner

ಸೈನಿಕರು ಹೋದ ದಿಕ್ಕನ್ನೇ ನೋಡುತ್ತಿದ್ದ ವೀರ ಸಿಂಹನು ಪಕ್ಕಕ್ಕೆ ತಿರುಗಿ, "ಇನ್ನು ಆ ಬಾಣವನ್ನು ಇತ್ತ ತನ್ನಿ. ಅವರಲ್ಲೇನಿದೆಯೋ ನೋಡೋಣ" ಎಂದು ಅಲ್ಲಿ ನಿಂತಿದ್ದವರಿಗೆ ಹೇಳಿದನು.

ಕೂಡಲೇ ವೀರಸಿಂಹನ ಪ್ರಧಾನ ಅಂಗರಕ್ಷಕನು ಭಯದಿಂದಲೇ ಓಡಿಹೋಗಿ ಆ ಬಾಣವನ್ನು ತಂದು ಅದಕ್ಕೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಿ, ಅದರೊಳಗಿದ್ದ ತಾಲಪತ್ರವನ್ನು ತೆಗೆದು ನಡುಗುವ ಕೈಗಳಿಂದಲೇ ವೀರಸಿಂಹನಿಗೆ ಕೊಟ್ಟನು.

ಆ ಪತ್ರದಲ್ಲಿ ಹೀಗೆ ಬರೆಯಲ್ಪಟ್ಟಿದ್ದಿತು, "ನಾವು ನಿಮ್ಮ ಕಡೆಯವರಿಂದ ಏನನ್ನೂ ದೋಚಿಕೊಳ್ಳಲಿಲ್ಲ. ನಿಜಕ್ಕೂ ನೀವೇ ಏನೂ ಅರಿಯದ ಪಾಪದ ಪ್ರಜೆಗಳಿಂದ ದೋಚಿಕೊಳ್ಳುತ್ತಿದ್ದೀರಿ. ನಿಜವಾದ ದರೋಡೆಕೋರರು ನೀವೇ. ರೈತರು ಕಾಯಕಷ್ಟ ಮಾಡಿ ಬೆಳೆಸಿದ ಧಾನ್ಯಗಳನ್ನು ನೀವು ಬಲವಂತವಾಗಿ ದೋಚಿಕೊಳ್ಳುತ್ತಿದ್ದೀರಿ. ಆ ಧಾನ್ಯಗಳಿಂದ ಆಯುಧಗಳನ್ನು ಕೊಂಡುಕೊಳ್ಳಬೇಕೆಂದು ನೀವು ಅಂದು ಕೊಂಡಿದ್ದೀರಿ. ನಮ್ಮ ಪ್ರಜೆಗಳಿಗೆ ಬೇಕಾದ್ದು ಅನ್ನ ಬಟ್ಟೆಗಳೇ ಹೊರತು ಆಯುಧಗಳಲ್ಲ. ಆದುದರಿಂದಲೇ ಅನ್ಯಾಯವಾಗಿ ನೀವು ಕೊಳ್ಳೇ ಹೊಡೆಸಿದ ಧಾನ್ಯಗಳನ್ನು ಹಿಂದೆ ಪಡೆದುಕೊಳ್ಳಲು ಹೀಗೆ ಪ್ರಯತ್ನ ಮಾಡಬೇಕಾಗಿ ಬಂತು. ಅಪರಾಧಿಗಳಾರೆಂಬುದನ್ನು ಈ ರೀತಿಯಾಗಿ ತಿಳಿಸಬೇಕಾಯಿತು. ನೀವು ಪ್ರಜಾರಕ್ಷಕರೋ ಭಕ್ಷಕರೋ ಎಂಬುದನ್ನು ನಿಮಗೆ ನೀವೇ ಕೇಳಿಕೊಳ್ಳಿ!"

ಓದಿ ಮುಗಿಸುವಾಗ ವೀರಸಿಂಹನ ಕಣ್ಣುಗಳು ಅತ್ಯಾರಕ್ತವಾದುವು, ಇಡೀ ಸಭೆ ನಿಮಿಷ ಮಾತ್ರ ನಿಃಶಬ್ದವಾಯಿತು.

ಕಪಾಲಕಂಕನು ಬಾಣ ಬಿಟ್ಟವನನ್ನು ಕೈಕಾಲು ಕಟ್ಟಿ ತರುವನೆಂಬ ಆಶೆಯಲ್ಲಿ ಪ್ರಧಾನ ದ್ವಾರದ ಕಡೆಗೇ ವೀರಸಿಂಹನು ನೋಡುತ್ತಿದ್ದನು. ಆದರೆ ಯಾಕೋ ಕಪಾಲಕಂಕನ ಜಾಡು ಕಾಣಲಿಲ್ಲ. ವೀರಸಿಂಹನು ಸಹನೆ ತಪ್ಪಿ, ಆಗ್ರಹಾವೇಶದಿಂದ ಓಲಾಡುತ್ತ, "ತಿಳಿಯಿತು. ನಾನೀಗ ಯಾವನೋ



ನಮ್ಮ ಕಡೆಯುವರಿಂದ ದ್ರೋಹಿಕೊಳ್ಳುತ್ತಾನೆಂದು ಹೇಳಿದೆನಷ್ಟೆ? ಅದನ್ನು ಕೇಳಿದ ಮೇಲೆಯೇ, ನಮ್ಮ ಮಧ್ಯದಲ್ಲಿರುವ ಯಾವನೋ ಶತ್ರುವಿನ ಗೂಢಚಾರಿ ಈ ಬಾಣ ಪ್ರಯೋಗ ಮಾಡಿದ್ದಾನೆ. ಅವನೇ ಈ ಪತ್ರ ಕೂಡಾ ಬರೆದಿರಬೇಕು. ಇದು ಎಷ್ಟು ಮಾತ್ರಕ್ಕೂ ಸಹಿಸುವಂಥಾದ್ದಲ್ಲ. ಕ್ಷಮಿಸುವಂಥಾದ್ದೂ ಅಲ್ಲ. ಏನು ನೋಡುತ್ತೀರಿ? ಝಡತೀ ನಡೆಸಿರಿ! ಹತಮಾಡಿರಿ! ಕೊಲ್ಲಿರಿ!... ಉಹುಂ. ಬೇಡ, ಬೇಡ. ತಡೆಯಿರಿ, ತಡೆಯಿರಿ! ಕೊಲ್ಲಬೇಡಿ. ಅವನ ಬಾಯಿಯಿಂದ ದುಷ್ಟ ದಂಗೇಕೋರರ ಗುಂಪು ಎಲ್ಲಿದೆ ಎಂಬುದನ್ನು ಕಕ್ಕಿಸಲೇ ಬೇಕು! ಗುದ್ದಿರಿ ಅವನ ಬೆನ್ನಿಗೆ! ಜಜ್ಜಿರಿ ಅವನ ಮೂಗನ್ನು! ಉದುರಿಸಿರಿ ಅವನ ಹಲ್ಲು!" ಎಂದು ಹುಚ್ಚನ ಹಾಗೆ ಕೂಗತೊಡಗಿದನು.

ಕಪಾಲಕಂಕನೂ ಅವನ ಅನುಚರರೂ ಹಿಂದಿರುಗಿ ಬಂದು ಸಭಾ ಮಂಟಪದೊಳಗೆ ಅಡಿಯಿಟ್ಟ ಕೂಡಲೇ, "ಎಲ್ಲಿದ್ದಾನೆ ಆ ದ್ರೋಹಿ? ಹಿಡಿದು ಅವನ ಬಾಯಿಯಿಂದ ಸತ್ಯವನ್ನು ಕಕ್ಕಿಸದೆಯೇ ಕೊಂದೇಬಿಟ್ಟಿರಾ? ಹೇಳಿ ಮೂರ್ಖರೇ..." ಎಂದು ಅರಚಿದನು ವೀರಸಿಂಹ.

"ಇಲ್ಲ ಮಹಾಪ್ರಭುಗಳೇ! ಆ ದುಷ್ಟ ಇಲ್ಲಿಂದ ತಪ್ಪಿಸಿಕೊಂಡು ಓಡಿಹೋಗಿಬಿಟ್ಟನು. ರಾಜಭವನದ ಕಿಟಕೀ ಮೂಲಕ ಅವನು ಬಾಣ ಪ್ರಯೋಗ ಮಾಡಲು ಬಾಣದ ಗುರಿ ಹಿಡಿದಾಗ, ನಮ್ಮ ಭಟನೊಬ್ಬನು ನೋಡಿ ಅವನನ್ನು ಹಿಡಿಯಲು ಪ್ರಯತ್ನಿಸಿದನಂತೆ. ಅಷ್ಟರಲ್ಲಿ ಅವನು ಅಲ್ಲಿಂದ ಓಡಿ ಕುದುರೇ ಮೇಲೆ ಹಾರಿ ಏರಿ ಓಡಿಹೋದನಂತೆ!" ಎಂದನು ಕಪಾಲಕಂಕ.

"ಕುದುರೇ ಮೇಲೆ ಹಾರಿ ಓಡಿದರೆ, ಅವನ ಬೆಂಬತ್ತಲು ನಮ್ಮ ಹತ್ತಿರ ಕುದುರೆಗಳೇ ಇಲ್ಲವೆ? ಎಲ್ಲಾ ಸತ್ತುಹೋದುವೇ?" ಎಂದನು ಕೋಪಾವೇಶದಲ್ಲಿ ವೀರಸಿಂಹ.

"ನಮ್ಮ ಭಟನು ಅಶ್ವಶಾಲೆಗೆ ಓಡಿ ಕುದುರೆಯ ಮೇಲೆ ಬೆನ್ನಟ್ಟುವಷ್ಟರೊಳಗೇ ಅವನು ಗಾಳಿಯೋಡಿದ ಹಾಗೆ ಕಾಣೆಯಾಗಿ ಹೋದನು ಮಹಾಪ್ರಭೂ!" ಎಂದನು ಕಪಾಲಕಂಕ.

"ಆ ಕೈಲಾಗದ ಭಟನನ್ನು ಕಡಿದು ಹಾಕು... ಆ ಕುದುರೆಯನ್ನೂ ಎರಡು ತುಂಡು..." ಎಂದು ಅರಚಿದನು ವೀರಸಿಂಹ.

ವೀರಸಿಂಹನು ಕೋಪಾವೇಶದಲ್ಲಿ ಹುಚ್ಚು ಹಿಡಿದ ಹಾಗೆ ಮಾತಾಡುವುದನ್ನು ನೋಡಿ ಸಭೆಯಲ್ಲಿದ್ದವರೆಲ್ಲಾ ಆಶ್ಚರ್ಯದಿಂದ ದಿಕ್ಕೆಟ್ಟು ಹೋದಂತೆ ತಮ್ಮ ತಮ್ಮೊಳಗೇ ಪ್ರಶ್ನಾರ್ಥಕವಾಗಿ ಮೋರೆ ಮೋರೆ ನೋಡಿಕೊಂಡರು. —(ಇನ್ನೂ ಇದೆ)






## ೧೧

[ವೀರಸಿಂಹನು ಹೊಸ ಸೈನ್ಯವನ್ನು ಸಮೀಕರಿಸುವ ಕಾರ್ಯಕ್ಕೆ ತಲೆಹಾಕಿ, ಪ್ರಜೆಗಳಿಂದ ಬಲವಂತವಾಗಿ ಹೆಚ್ಚಿನ ಧಾನ್ಯವನ್ನು ವಸೂಲು ಮಾಡಿ, ಅದರಿಂದ ಚಂದ್ರಪುರಿಯ ಆಯುಧಗಳನ್ನು ಕೊಂಡುಕೊಳ್ಳುವಂತೆ ತನ್ನ ಕಡೆಯವರಿಗೆ ಆಜ್ಞೆ ಮಾಡಿದನು. ಅದಕ್ಕೆ ಪ್ರಜೆಗಳಿಂದ ವಿರೋಧವೆದ್ದಿತು. ವಸಂತನ ಮುಖಂಡತೆಯಲ್ಲಿ ಕೆಲವು ಮಂದಿ ಯುವಕರು ಪಾಮರ ಪ್ರಜೆಗಳ ರಕ್ಷಣೆಗೆ ಬದ್ಧಕಂಕಣರಾದರು. —ಹೀಗಿರುವಾಗ]

ಅರಣ್ಯದ ನಡುವೆ ಮಧ್ಯಾಹ್ನದಲ್ಲಿ ಜಯಾನಂದ ಮುನಿ ಒಂದು ಮರದ ನೆರಳಿನಲ್ಲಿ ವಿಶ್ರಾಂತಿಗಾಗಿ ಕುಳಿತಿದ್ದನು. ಆಗ ಆತನ ಶಿಷ್ಯರಲ್ಲೊಬ್ಬನಾದ ಗೋವಿಂದನು ಬಂದು "ಗುರುಗಳೆ, ಒಂದು ವಿಶೇಷ ಸಮಾಚಾರವನ್ನು ತಮ್ಮ ಮುಂದೆ ಅರಿಕೆ ಮಾಡಲು ಬಂದೆನು. ಆಗಾಗ ಈ ಕಡೆಯಲ್ಲಿ ಮುಸುಗಿನ ಮನುಷ್ಯನೊಬ್ಬ ಸುಳಿಯುತ್ತಾ ಇರುತ್ತಾನೆ. ಇಲ್ಲಿರುವ ಬೆಟ್ಟದ ತೊರೆಯ ನೀರು ಕುಡಿಯಲು ಬರುವ ಹಾಗೆ ಬರುತ್ತಾನೆ. ಅಲ್ಲಿರುವ ಗುಹೆಗಳ ಕಡೆಗೆ ಪರಿಶೀಲಿಸಿ ನೋಡುವ ಹಾಗೆ ಮೆಲ್ಲಗೆ ಆಚೀಚೆ ನೋಡುತ್ತಾನೆ. ಇನ್ನೊಬ್ಬರಿಗೆ ತಾನು ಕಾಣಬಾರದೆಂದು ಅವನ ಭಾವನೆ. ನಾನು ಅವನಿಗೆ ಕಾಣದಂತೆಯೇ ಗಮನಿಸಿದ್ದೇನೆ. ಹೀಗೆ ನಿನ್ನೆ ಸಾಯಂಕಾಲದಲ್ಲಿ ನಾನು ಅವನನ್ನು ನೋಡುವುದು ಮೂರನೇ ಸಾರಿ" ಎಂದನು ಗೋವಿಂದ.

"ಹೌದು ಗೋವಿಂದಾ. ನಿನಗಿಂತಲೂ ದೂರದಲ್ಲಿ ನಾನು ಅವನನ್ನು ಐದುಸಾರಿ ನೋಡಿದ್ದೇನೆ. ಅವನ ಹಾವಭಾವ ನಡಿಗೆ ನೋಟಗಳನ್ನು ನೋಡಿದರೆ ಯಾರೋ ದೊಡ್ಡವನಾಗಿರಬೇಕೆಂದೇ ಕಾಣುತ್ತದೆ. ಏನೋ ಮಹತ್ತರವಾದ ಕಾರ್ಯ



ದೀಕ್ಷೆ ಹಿಡಿದವನಾಗಿರಬೇಕು. ಇನ್ನೊಂದು ಸಾರಿ ಅವನು ಕಂಡುಬಂದಾಗ ನನಗೆ ಹೇಳು. ನಾನು ಮಾತಾಡಿಸುತ್ತೇನೆ " ಎಂದನು ಜಯಾನಂದ ಮುನಿ.

ಕೆಲವು ದಿನಗಳ ಮೇಲೆ, ಅದೊಂದು ಸಾಯಂಕಾಲ ಸಂದೀಪ ಕುಮಾರನು ಹುಲಿಮರಿಗಳೊಂದಿಗೆ ಆಡಿಕೊಂಡಿದ್ದನು. ಅವನು ಹುಲಿಗಳೊಂದಿಗೆ ಕುಸ್ತೀಯಾಡುವುದನ್ನು ನೋಡಿ, ಪಕ್ಕದಲ್ಲಿದ್ದ ಭಲ್ಲೂಕೀ ಕರಡಿ ಹಾರಿಹಾರಿ ನಲಿಯುತ್ತಿದ್ದಿತು. ಒಂದು ಬಂಡೇಕಲ್ಲಿನ ಮರೆಯಲ್ಲಿ ನಿಂತು ಮುಸುಗಿನ ಮನುಷ್ಯನು ಆ ವಿಚಿತ್ರವನ್ನು ನೋಡುತ್ತಿದ್ದನು.

ಜಯಾನಂದ ಮುನಿ ಸದ್ದುಮಾಡದೆ ಅವನ ಹಿಂದೆ ನಿಂತು, " ಸುಸ್ವಾಗತ ! " ಎಂದನು.

ಮುಸುಗಿನವನು ಮೆಟ್ಟಿಬಿದ್ದು ಹಿಂದಿರುಗಿ ನೋಡಿ, ಬಂಡೆಗಳೆಡೆಯಿಂದ ಈಚೆಗೆ ಬಂದು, ಎರಡು ಕೈಗಳನ್ನು ಜೋಡಿಸಿ ತಲೆತಗ್ಗಿಸಿ ಜಯಾನಂದ ಮುನಿಗೆ ನಮಸ್ಕಾರ ಮಾಡಿದನು.

" ನೀನು ಏನನ್ನೋ ಹುಡುಕುತ್ತ ಈ ಪ್ರಾಂತದಲ್ಲಿ ತಿರುಗುವುದನ್ನು ಗಮನಿಸಿದ್ದೇನೆ. ಏನನ್ನು ಹುಡುಕುವುದೆಂದು ಗೊತ್ತಾದರೆ, ಸರಿಯಾದುದೆಂದು ತೋರಿದರೆ ನಮ್ಮಿಂದಾಗುವ ಸಹಾಯ ಮಾಡಬಹುದು " ಎಂದನು ಜಯಾನಂದ ಮುನಿ.

ನನ್ನ ಸಂಗತಿ ಇಲ್ಲಿ ಯಾರಿಗೂ ಗೊತ್ತಾಗಿಲ್ಲವೆಂದುಕೊಂಡಿದ್ದೆ. ನೀವು ನನ್ನ ವಿಷಯ ಕಂಡುಹಿಡಿದದ್ದು ಬಹಳ ಆಶ್ಚರ್ಯ ! " ಎಂದನು ಮುಸುಗಿನವನು.

" ಒಂದು ನಂಬುಗೆ ಕೊಡುತ್ತೇನೆ. ನಿನ್ನ ಸಂಗತಿ ಧಿಡೀರ್ ರಾಜನಾಗಿರುವ ವೀರಸಿಂಹನಿಗೆ ತಿಳಿದುಬಿಡುತ್ತದೆಂದು ಸಂದೇಹಿಸಬೇಕಾಗಿಲ್ಲ. ಇಲ್ಲಿ ಯಾರು ಕಾಲಿಟ್ಟರೂ ಮರುಕ್ಷಣದಲ್ಲೇ ನಮಗೆ ಗೊತ್ತಾಗಿಬಿಡುತ್ತದೆ " ಎಂದನು ಜಯಾನಂದ ಮುನಿ.

ಮುಸುಗಿನವನು ಜಯಾನಂದನನ್ನು ಸ್ವಲ್ಪ ಹೊತ್ತು ಪರಿಶೀಲಿಸಿ ನೋಡಿ, " ತಾವು ಜಯಾನಂದ ಮುನೀಂದ್ರರು ತಾನೆ ? ಹಾಗಿದ್ದರೆ ನಿಮಗೆ ಇದೋ ಪ್ರತ್ಯೇಕ ನಮಸ್ಕಾರ ! " ಎಂದು ಮತ್ತೆ ಕೈಮುಗಿದು ತಲೆಬಾಗಿದನು. ಜಯಾನಂದನು ಮಂದಹಾಸದಿಂದ ತಲೆದೂಗಲು, ಮುಸುಗಿನವನು ಮುನಿಯ ಪಾದಗಳನ್ನು ಮುಟ್ಟಿ ನಿಂತು, " ಮಹಾನುಭಾವಾ! ನಿಮ್ಮ ಸಂಗತಿಯನ್ನು ಸ್ವಲ್ಪಮಟ್ಟಿಗೆ ನನ್ನ ಮಿತ್ರನಾದ ಜಯಪುರಿಯ ರಾಜ ಶಂಕರವರ್ಮನಿಂದ ತಿಳಿದಿದ್ದೇನೆ. ಆದರೆ ವೀರಸಿಂಹನ ಚಾರರ ಸಮಾಚಾರವನ್ನು ತಮಗೆ ತಿಳಿಯಪಡಿಸುವವರು ಯಾರು ? ಅಷ್ಟೊಂದು ಜಾಗರೂಕತೆಯಿಂದ ತಾವಿರಬೇಕಾದರೆ ತಮ್ಮ ಸುತ್ತಲೂ, ಅಂದರೆ ಈ ಪ್ರಾಂತ್ಯದಲ್ಲಿ ಯಾರಾದರೂ ತಮ್ಮ ಆಳುಗಳಿರಬೇಕಷ್ಟೆ ? ಹಾಗೆ ಯಾರೂ ಇರುವಂತೆ ಕಾಣುವುದಿಲ್ಲವಲ್ಲಾ ? " ಎಂದನು.

" ಅವನ್ನೆಲ್ಲಾ ತಿಳಿಸಲು ಮನುಷ್ಯರ ಹೊರತು ಬೇರೆ ದಾರಿ ಇಲ್ಲವೆಂದು ನಿನ್ನ ಅಭಿಪ್ರಾಯವೆ ? " ಎಂದು ನಗುತ್ತಾ ಕೇಳಿದನು ಜಯಾನಂದ ಮುನಿ.



Scanned by CamScanner

ಮುಸುಗಿನವನು ಮತ್ತಷ್ಟು ಆಶ್ಚರ್ಯದಿಂದ, "ಹಾಗಾದರೆ ತಾವು ಮಾನವಾತೀತ ಶಕ್ತಿ ಸಾಧಿಸಿ ಕೊಂಡ ಮಹರ್ಷಿಗಳೆಂದೇ ಆಯಿತು!" ಎಂದನು.

"ಈ ಸಣ್ಣ ವಿಷಯಕ್ಕೆ ಮಾನವಾತೀತ ಶಕ್ತಿಗಳೇಕೆ ಹೇಳು? ಯೋಗನಿಷ್ಠೆಯಲ್ಲಿ ಕುಳಿತು ತಪಸ್ಸು ಮಾಡಿ ಅಂತಹ ಶಕ್ತಿಗಳನ್ನು ಸಾಧಿಸುವುದಕ್ಕಿಂತಲೂ, ಈ ಅರಣ್ಯದಲ್ಲಿರುವ ಪ್ರಾಣಿ ಸಮೂಹಗಳೊಂದಿಗೆ ಸ್ನೇಹ ಮಾಡಿ ಸಾಧಿಸಿಕೊಳ್ಳುವುದು ಸುಲಭವಲ್ಲವೇನು?" ಎಂದನು ಜಯಾನಂದ.

ಈ ಮಾತು ಕೇಳಿ ಮುಸುಗು ಮನುಷ್ಯನ ಮುಖವು ಅತ್ಯಂತ ಸಂತೋಷದಿಂದ ಅರಳಿತು.

"ಬಹು ನಿಜ! ಹುಲಿಗಳೊಂದಿಗೂ, ಕರಡಿಗಳೊಂದಿಗೂ ಆ ಹಸುಕಂದನು ಹೇಗೆ ಆಡಿಕೊಳ್ಳಲು ಸಾಧ್ಯವಾಯಿತೆಂದು ಈಗ ಅರ್ಥವಾಯಿತು. ಆ ಹುಡುಗನು ಯಾರು ಮಹಾಸ್ವಾಮಿ?" ಎಂದು ಕೇಳಿದನು ಮುಸುಗಿನವನು.

"ನೀನು ಕೇಳಿದ ಪ್ರಶ್ನೆಗೆ ಉತ್ತರ ಹೇಳಬೇಕಾದರೆ ನೀನು ಯಾರೆಂಬುದು ನಮಗೆ ತಿಳಿಯಬೇಕು" ಎಂದನು ಜಯಾನಂದ ಮುನಿ.

ಮುಸುಗಿನವನು ಒಂದೆರಡು ಕ್ಷಣ ಸುಮ್ಮನಿದ್ದು, "ಮಹಾಸ್ವಾಮಿ, ನನಗೆ ನಿಮ್ಮ ಮೇಲೆ ಸಂಶಯವಿಲ್ಲ. ನಂಬುತ್ತೇನೆ" ಎಂದು ಹೇಳಿ ಮುಖದ ಮುಸುಕನ್ನು ತೊಲಗಿಸಿದನು.

ಜಯಾನಂದ ಮುನಿ ಪ್ರಶಾಂತ ಭಾವದಲ್ಲಿ ತಲೆದೂಗುತ್ತ, "ಆ ಹಸುಕಂದ, ಪ್ರಕೃತಿ ಮಾತೆಯ ಸಾಕು ಮಗನಾಗಿ ಬೆಳೆಯುವ ಎಳೆ ಹುಡುಗ. ಸಾಕ್ಷಾತ್ ನಿನ್ನ ಔರಸ ಪುತ್ರನೇ. ಯುವರಾಜ ಕುಮಾರನೇ! ನಾನು ನಿನ್ನನ್ನು ಹಿಂದೆ ಯಾವಾಗಲೋ ಒಂದುಸಾರಿ ಮಾತ್ರವೇ ನೋಡಿದ್ದೇನೆ. ಆದರೂ ಯುವರಾಜನ ರೂಪಾಕಾರಗಳಿಂದ ನಿನ್ನನ್ನು ಹೋಲಿಸಿಕೊಂಡು ಗುರುತಿಸುತ್ತೇನೆ" ಎಂದನು.



ಆನಂದದಲ್ಲಿ ಬೆಕ್ಕಸಬೆರಗೂ ಸೇರಿ ಶಾಂತಿದೇವನ ಕಂಠವು ರುದ್ಧವಾಗಿ ಕಣ್ಣುಗಳು ತುಂಬಿಕೊಂಡುವು.

"ರಾಜಾ, ನೀನು ಜೀವದಿಂದಿದ್ದರೆ ರಾಣಿಯನ್ನೂ ಕುಮಾರನನ್ನೂ ಹುಡುಕುತ್ತ ಎಂದೋ ಒಂದು ದಿನ ಇಲ್ಲಿಗೆ ಬರುವಿ ಎಂದು ನಾನು ಅಂದುಕೊಂಡಿದ್ದೆ. ರಾಣಿ ಎಳೆ ಮಗುವನ್ನು ನನ್ನ ಕೈಗೆ ಒಪ್ಪಿಸಿ ಶಾಶ್ವತವಾಗಿ ಕಣ್ಣು ಮುಚ್ಚಿದಳು. ನೀನು ಜೀವದಿಂದಿರುವ ಸಂಗತಿ ಗೊತ್ತಾಗಿದ್ದಿದ್ದರೆ ಆಕೆ ಇನ್ನಷ್ಟು ಸಂತೋಷದಿಂದ ದೇಹತ್ಯಾಗ ಮಾಡುತ್ತಿದ್ದಳು. ಆದರೂ ವೀರ ಪತ್ನಿಯಾದ ಅವಳು, ಭವಿಷ್ಯತ್ತನ್ನು ಭಗವಂತನಿಗೆ ಅರ್ಪಿಸುವಂತೆ ಹೇಳಿದ ನನ್ನ ಸಲಹೆಯನ್ನು ಪಾಲಿಸಿ, ಪ್ರಶಾಂತತೆಯಲ್ಲಿ ಕೊನೆಯುಸಿರು ಬಿಟ್ಟಳು. ತನ್ನ ಪುತ್ರನು ಸರಿಯಾದ ರೀತಿಯಲ್ಲಿ ಕಾಪಾಡಲ್ಪಡುವನೆಂದು ಅವಳು ನಂಬಿ ತನ್ನ ಕರ್ತವ್ಯ ತೀರಿತೆಂಬ ಧನ್ಯತಾಭಾವದಲ್ಲಿ ದೇಹ ಬಿಟ್ಟಿದ್ದಾಳೆ. ನಿಜಕ್ಕೂ ತನ್ನ ಶಕ್ತಿ ಮೀರಿ ವಂಶದ ಕುಡಿಯನ್ನುಳಿಸುವ



ತನ್ನ ಕರ್ತವ್ಯ ಪಾಲನೆಯನ್ನು ವಿಜ್ಞತೆಯಿಂದ ನಡೆಸಿದ್ದಾಳೆ. ಆಕೆ ಪರಮ ಭಕ್ತಳು!" ಎಂದನು ಜಯಾನಂದ ಮುನಿ.

ಶಾಂತಿದೇವನು ಗದ್ಗದ ಕಂಠದಿಂದ "ಆಮೇಲೆ ಅವಳ ಭೌತಿಕಕಾಯ...?" ಎಂದನು.

"ಅಲ್ಲಿಯೇ ಸಮಾಧಿ ಮಾಡಿದೆವು ಮಹಾರಾಜಾ" ಎಂದು ಜಯಾನಂದ ಮುನಿ ದೂರದಲ್ಲಿದ್ದ ಬಂಡೆಯನ್ನು ತೋರಿಸಿದನು.

ಆ ಬಂಡೆಯ ಮೇಲೆ ಬಗೆಬಗೆಯ ಹೂಗಳಿರುವುದನ್ನು ರಾಜನು ನೋಡಿದನು.

ಊಹೆ ತಿಳಿದಂದಿನಿಂದ ಪ್ರತಿ ದಿನ ಬೆಳಿಗ್ಗೆ ಯುವರಾಜನು ತಾಯಿಯ ಸಮಾಧಿಯ ಮೇಲೆ ಹೂಗಳನ್ನು ಚೆಲ್ಲಿ ಪೂಜಿಸಿ ಕೈ ಮುಗಿಯುತ್ತಾನೆ.

ರಾಜನು ಉಕ್ಕುಕ್ಕಿ ಬರುವ ದುಃಖವನ್ನು ಸಹಿಸಲಾಗದೆ ಆ ಸಮಾಧಿ ಕಲ್ಲಿನ ಹತ್ತಿರ ಹೋಗಿ ಕಲ್ಲಿಗೆ ತಲೆ ಹಚ್ಚಿ ಹಚ್ಚಿ ವಿಲಪಿಸತೊಡಗಿದನು.

ಜಯಾನಂದನು ಅವನ ಹತ್ತಿರ ಹೋಗಿ, ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿದನು.

ರಾಜನು "ನಾನು ನನ್ನ ಮಗನನ್ನು ನೋಡಬಹುದೆ?" ಎಂದು ಪ್ರಶ್ನಿಸಿದನು.

"ಸ್ವಲ್ಪ ನೋಡಿರುವಿಯಷ್ಟೆ? ಇನ್ನೂ ಚೆನ್ನಾಗಿ ಬೇಕಾದರೆ ನೋಡಬಹುದು. ಅದಕ್ಕೆ ನನ್ನ ಅಭ್ಯಂತರವೇನೂ ಇಲ್ಲ. ನಿನ್ನ ಇಷ್ಟ" ಎಂದನು ಮುನೀಂದ್ರ.

ಶಾಂತಿದೇವನು ಸ್ವಲ್ಪ ಹೊತ್ತು ಏನೋ ಆಲೋಚನೆ ಮಾಡಿ, "ಮಹಾಸ್ವಾಮಿ, ಈ ವಿಷಯದಲ್ಲಿ ತಮಗೇನೋ ಅಸಂತೃಪ್ತಿಯಿರುವ ಹಾಗೆ ಸಂದೇಹಿಸುತ್ತೇನೆ. ನೀವು ಮನಃಪೂರ್ವಕವಾಗಿ ಅನುಜ್ಞೆ ಕೊಟ್ಟರೆ ಮಾತ್ರವೇ ನಾನು ಅವನನ್ನು ನೋಡುತ್ತೇನೆ. ಇಲ್ಲದಿದ್ದರೆ ಅಗತ್ಯವಿಲ್ಲ ಸ್ವಾಮಿ" ಎಂದನು ಗಂಭೀರನಾಗಿ.

"ಮಹಾರಾಜಾ! ಯುವರಾಜನು ಪ್ರಕೃತಿಯ ಮಡಿಲಲ್ಲಿ ಬೆಳೆಯುತ್ತ, ಪ್ರಶಾಂತವಾಗಿ ನನ್ನ ಹತ್ತಿರ ವಿದ್ಯಾಭ್ಯಾಸ ಮಾಡಿಕೊಂಡಿದ್ದಾನೆ. ಅವನ ಬುದ್ಧಿ ತುಂಬ ನಿಶಿತವಾಗಿದೆ. ಸೂಕ್ಷ್ಮಜ್ಞಾನವೂ ಅದ್ಭುತವಾಗಿದೆ. ನಿನ್ನನ್ನು ನೋಡಿದ ಕೂಡಲೇ ತನ್ನ ತಂದೆ ಎಂದು ಗುರುತಿಸುವಷ್ಟರ ಮಟ್ಟಿಗೆ ಬಂದಿದ್ದಾನೆ. ಹಾಗಾಗಿ ಬಿಟ್ಟರೆ, ನಡೆದ ನಿಜ ಸಂಗತಿಗಳನ್ನೆಲ್ಲಾ ಬಯಲುಪಡಿಸಲೇ ಬೇಕಾಗುತ್ತದೆ. ಧರ್ಮಬದ್ಧನಾದ ತನ್ನ ತಂದೆ ದುಷ್ಟರ ಕುತಂತ್ರಗಳಿಗೆ ಬಲಿಯಾದನೆಂದು ತಿಳಿದರೆ ಆ ನೋವು ಆ ಎಳೆಯನ ಮನಸ್ಸನ್ನು ಬಾಧಿಸದೆ ಬಿಡದು. ಅದರೊಂದಿಗೆ ಹಗೆ ಸಾಧಿಸಬೇಕೆಂಬ ತುಡಿತ ಬಂದು ಬಿಡುತ್ತದೆ. ಇಂತಹ ಆಗ್ರಹಾವೇಶದ ಜ್ವಾಲೆ ಎಳೆಯ ಹೃದಯದಲ್ಲಿದ್ದರೆ, ಅದಕ್ಕೆ ತಕ್ಕ ಪ್ರಾಯ ಸಮರ್ಥತೆ ಈಗ ಬಂದಿಲ್ಲವಷ್ಟೆ? ಪ್ರಸ್ತುತದಲ್ಲಿ ಪ್ರಶಾಂತ ಜೀವನ ಕ್ರಮದಲ್ಲಿಯೇ ಅವನ ವಿದ್ಯೆಗಳು ವಿಕಸನವಾಗಬೇಕು. ಅದು ಹಗೆಯ ಜ್ವಾಲೆಯಿಂದ ಉರಿದು ಹೋಗಲು



Scanned by CamScanner



ಬಿಡಬಾರದು. ನಿನ್ನಲ್ಲಿ ಉಕ್ಕುವ ಪುತ್ರ ವ್ಯಾಮೋಹ ವನ್ನು ಹತ್ತೊತ್ತಿಕೊಳ್ಳುವುದೇ ಒಳ್ಳೆಯದೆಂದು ನಿನಗೆ ಗೊತ್ತಾದುದಕ್ಕೆ ಸಂತೋಷಿಸುತ್ತೇನೆ. ನೀನು ನಿಜಕ್ಕೂ ಧನ್ಯನು " ಎಂದನು ಜಯಾನಂದ ಮುನಿ.

" ಹೌದು. ಮಹಾನುಭಾವರೇ ! ಚಂಚಲಿಸುವ ಮನಸ್ಸನ್ನು ನಿಮ್ಮ ಮಾತುಗಳಿಂದ ಎಚ್ಚರಿಸಿದಿರಿ. ದೂರದಿಂದ ನೋಡಿದೆನಲ್ಲ. ನನ್ನ ಪುತ್ರನ ವಿಚಿತ್ರ ದಾಟಗಳನ್ನು ! ಸಾಕು ಸದ್ಯಕ್ಕೆ ! " ಎಂದು ಗಟ್ಟಿಯಾದ ನಿಟ್ಟುಸಿರು ಬಿಟ್ಟನು ಶಾಂತಿದೇವ.

" ಆದರೂ, ಈಗಲ್ಲದಿದ್ದರೂ ಇನ್ನು ಬೇಗದಲ್ಲೇ ಯುವರಾಜನಿಗೆ ನಿಜ ಸಂಗತಿ ತಿಳಿದೇ ಬಿಡುತ್ತದೆ. ಆಗ ಅವನು ತನ್ನ ಇಷ್ಟಾನುಸಾರವಾಗಿ ಕರ್ತವ್ಯ ನಿರ್ವಹಣೆ ಮಾಡುವುದೂ ನಿಜವೇ. ಆ ಕಾಲ ಬೇಗನೇ ಬರಲಿದೆ ! " ಎಂದನು ಜಯಾನಂದ ಮುನಿ.

"ಪುತ್ರಬಂಧನ ಹರಿದೊಗೆಯುವುದೇ ಒಳ್ಳೆಯದು" ಎಂದನು ರಾಜ.

" ಹಾಗೇಕೆ ಹೇಳುವಿ ಮಹಾರಾಜಾ ? " ಎಂದು ಕೇಳಿದನು ಜಯಾನಂದ ಮುನಿ.

" ನೀವು ನನ್ನ ಪುತ್ರನನ್ನು ಕಣ್ಣಿನ ರೆಪ್ಪೆಯ ಹಾಗೆ ಕಾಪಾಡುವಿರೆಂದು ಗೊತ್ತಾಗಿದೆ. ಅದರ ಮೇಲೆ ನೀವು ಕಲಿಸುವ ವಿಶೇಷ ವಿದ್ಯೆಗಳನ್ನು ನಾನು ಕಲಿಸ ಲಾರೆನು. ಅಲ್ಲದೆ ಅದಕ್ಕಿಂತ ಹೆಚ್ಚಿನ ಬಾಧ್ಯತೆಗಳು ಈಗ ನನ್ನ ಮೇಲಿದೆ ! " ಎಂದನು ರಾಜ.

" ಅದೆಂತಹ ಗುರುತರ ಬಾಧ್ಯತೆ ಮಹಾರಾಜಾ?" ಎಂದು ಪ್ರಶ್ನಿಸಿದನು ಮುನಿ.

" ಮಹಾನುಭಾವರೇ ! ಪ್ರಸ್ತುತದಲ್ಲಿ ಸುಮೇಧ ರಾಜ್ಯದೊಳಗೆ ನೆಲೆಸಿರುವ ಪರಿಸ್ಥಿತಿ ಎಂತಹುದೆಂದು ನಿಮಗೆ ಗೊತ್ತಿದೆಯೋ ಇಲ್ಲವೋ ನಾನರಿಯೆನು. ನನ್ನನ್ನೂ, ನನ್ನ ರಾಣಿಯನ್ನೂ, ನಮ್ಮ ಮಗು ವನ್ನೂ ಹತಮಾಡಬೇಕೆಂದು ವೀರಸಿಂಹನು ಕುತಂತ್ರ ಮಾಡಿದನು. ನನ್ನ ಪತ್ನೀ ಪುತ್ರರ ಗತಿ ಏನಾಗಿದೆಯೋ, ನಾನು ಜೀವದಲ್ಲಿರುವೆನೋ ಎಂಬು ದಾವುದೂ ಅವನಿಗೆ ಇದಮಿತ್ಥವೆಂಬುದು ತಿಳಿಯದೆ ಆ ವೀರಸಿಂಹನಿಗೆ ಪಿತ್ಥ ಕೆದರಿದೆ. ನಾನೇನೋ ಅವನ ಬೆಂಬತ್ತಿಕೊಂಡೇ ಇದ್ದೇನೆ. ಹೀಗಾಗಿ ಅವನ ಮನಃಶಾಂತಿ ಕೆಟ್ಟಿದೆ. ಸದ್ಯಕ್ಕೇನೋ ರಾಜನೆನಿಸಿ ಕೊಂಡ ಅವನ ಉರಿಸಿಡಿತಗಳಿಗೆ ಏನೂ ಅರಿಯದ ಪ್ರಜೆಗಳು ಗುರಿಯಾಗುತ್ತಿದ್ದಾರೆ. ಒಮ್ಮೆ ಅಡ್ಡದಾರಿ ಹಿಡಿದು ಬಹುದೂರ ಹೋದವನು ಮತ್ತಷ್ಟು ಮುಳ್ಳುಕಲ್ಲುಗಳ ಗುಂಪಿನೊಳಗೆ ಸಿಕ್ಕಿಕೊಳ್ಳುತ್ತಾ ನೆಂದು ಹಿರಿಯರ ಮಾತು ನಿಜವಾಗಿ, ಬಹು ದೊಡ್ಡ ಪ್ರಜಾಕಂಟಕನಾಗಿದ್ದಾನೆ. ನೆರೆ ಹೊರೆ ರಾಜ್ಯಗಳ ಮೇಲೆ ದಂಡೆತ್ತಿ ಅಲ್ಲಿಯ ಸಂಪತ್ತನ್ನೆಲ್ಲಾ ಸೂರೆ ಮಾಡಿಕೊಳ್ಳಲು ತನ್ನ ದಳ ನಾಯಕರಿಗೆ ಆಶೆ ತೋರಿಸಿದನು. ಹಾಗೆ ನಮ್ಮ ಮಾವಯ್ಯನ ರಾಜ್ಯ ವಾದ ಅಮೃತಪುರಿಗೆ ದಂಡೆತ್ತಿಸಿದನು. ಆಗ ಒಳ್ಳೆಯ ಅದೃಷ್ಟದಿಂದಾಗಿ ಸುಮತೀ ನದಿಯಲ್ಲಿ ಆಕಸ್ಮಿಕ ನೆರೆ

ಬಂದು ವೀರಸಿಂಹನ ಸೇನೆಗಳೂ ಆಯುಧಗಳೂ ಬಹಳಮಟ್ಟಿಗೆ ನದಿಗೆ ಬಲಿಯಾದುವು. ಆಮೇಲೆ ಹೊಸತಾಗಿ ಸೈನ್ಯಬಲ ಹೆಚ್ಚಿಸಲು ಸಾಮಾನ್ಯ ಪ್ರಜೆಗಳ ದವಸ ಧಾನ್ಯಗಳನ್ನು ದೋಚಿಕೊಳ್ಳಲು ಪ್ರಾರಂಭಿಸಿದನು. ಹೀಗೆಲ್ಲಾ ನಡೆಯುವ ಅವನ ದುಷ್ಟ ಶಕ್ತಿಗಳನ್ನು ತಡೆದು ಮುರಿದು ಹಾಕಲು ನನ್ನಿಂದಾದಷ್ಟು ಪ್ರಯತ್ನ ಮಾಡುತ್ತಿದ್ದೇನೆ ಸ್ವಾಮೀ" ಎಂದನು ಶಾಂತಿದೇವ ರಾಜ.

ಅವನ ಮಾತುಗಳನ್ನು ಸಂತೋಷದಿಂದ ಕೇಳುತ್ತ ತಲೆದೂಗಿಕೊಂಡಿದ್ದ ಜಯಾನಂದ ಮುನಿ, "ರಾಜಾ, ಸುಮೇಧ ರಾಜ್ಯದಲ್ಲಿ ನಡೆಯುವ ಘೋರಗಳೆಲ್ಲವೂ ನನಗೆ ಗೊತ್ತಿದೆ. ವೀರಸಿಂಹನ ಭಟರ ಆಟಗಳನ್ನು ಅಲ್ಲಲ್ಲೇ ಕಟ್ಟಲು ಕೆಲವು ಯುವಕರು ಬದ್ಧಕಂಕಣ ರಾಗಿರುವುದನ್ನೂ ಬಲ್ಲೆನು. ವೀರಸಿಂಹನು ಆ ಯುವಕರನ್ನೆಲ್ಲಾ ಸಮೂಲವಾಗಿ ಹತ ಮಾಡಲು ನೋಡುತ್ತಿದ್ದಾನೆಂಬುದೂ ಗೊತ್ತಿದೆ. ವೀರಸಿಂಹನು ಎಷ್ಟರಮಟ್ಟಿಗೆ 'ರಾಜಹುಚ್ಚ'ನಾಗಿ ನಾಡಿನೊಳಗೆ ಕಾಡು ಕುಣಿತರುಣಿಯುವನೆಂದು ನಿನಗೆ ಚೆನ್ನಾಗಿ ಗೊತ್ತಾಗಿದೆಯಷ್ಟೆ? ಈಗ ಒಂದು ಸಂಗತಿ ನಿಶ್ಚಯ ವಾಯಿತು. ಆ ವೀರಸಿಂಹನು ಸಣ್ಣದೊಂದು ಎಡೆ ಸಿಕ್ಕಿದರೂ ಸತ್ಕಾರ್ಯಕ್ಕೆ ಕಂಕಣ ತೊಟ್ಟ ಯುವಕರ ನ್ನೆಲ್ಲಾ ಹುಟ್ಟಡಗಿಸಿ ಬಿಡುವಂಥ ಮಹಾ ಕಿರಾತಕ ನಾಗಿದ್ದಾನೆ. ಆದ್ದರಿಂದ ಅಂತಹ ಯುವಕರೆಲ್ಲಾ ಗಟ್ಟಿಯಾದ ಒಗ್ಗಟ್ಟಿನಿಂದ ಬಹಳ ಎಚ್ಚರಿಕೆಯಿಂದ ಸರಿಯಾದ ಪಥಕ ಹಾಕಿಕೊಂಡು ತಮ್ಮ ಹೋರಾಟ ಸಾಗಿಸಬೇಕು. ಮೊದಲು ವೀರಸಿಂಹನು ತನ್ನ ಅರಾಜಕ ಕೃತ್ಯಗಳನ್ನು ನಿಲ್ಲಿಸುವಂತೆ ಎಚ್ಚರಿಕೆ ಕೊಡಬೇಕು. ಸ್ವಲ್ಪಕಾಲ ಗಡುವನ್ನೂ ಕೊಟ್ಟು ಸುಮ್ಮನಿರಬೇಕು. ಆ ಗಡುವಿನ ಅವಧಿಯೊಳಗೆ ವೀರಸಿಂಹನು ವಿವೇಕದಿಂದ ಸರಿದಾರಿಗೆ ತಿರುಗಲಿಲ್ಲ ವಾದರೆ ಯುದ್ಧವು ತಪ್ಪದು! ಹಾಗೆ ಬರುವ ಯುದ್ಧವು ವೀರಸಿಂಹನ ಕಡೆಯ ಸೇನೆಗಳಿಗೂ, ವೀರ ಯುವಕರ ಗುಂಪುಗಳಿಗೂ ಮಾತ್ರವೇ ಬರಬೇಕಲ್ಲದೆ, ಸಂಬಂಧವಿಲ್ಲದ ಸಾಧಾರಣ ಪ್ರಜೆಗಳನ್ನು ಹಿಂಸಿಸಲೇ ಬಾರದು" ಎಂದನು ಜಯಾನಂದ ಮುನಿ.

"ನನ್ನ ಅಭಿಪ್ರಾಯವೂ ಅದೇ ಮಹಾಸ್ವಾಮೀ" ಎಂದನು ರಾಜ.

"ದೇಶರಕ್ಷಣೆಗೆ ಟೊಂಕಕಟ್ಟಿದ ವೀರ ಯುವಕರ ನ್ನೆಲ್ಲಾ ಸುಮೇಧ ರಾಜ್ಯದ ಸರಿಹದ್ದಿನಲ್ಲಿರುವ ಅರಣ್ಯ ದೊಳಗೆ ಸೇರಿಸಿ ನಡೆಸುವುದು ಶ್ರೇಯಸ್ಕರವೆಂದು ಹೇಳುತ್ತೇನೆ. ಒಪ್ಪುವಿಯಾ?" ಎಂದು ಕೇಳಿದ ಜಯಾನಂದ ಮುನಿಯ ಅಭಿಪ್ರಾಯವನ್ನು "ಹಾಗೆಯೇ ಆಗಲಿ" ಎಂದು ಶಿರಸಾವಹಿಸಿಕೊಂಡನು ಶಾಂತಿದೇವ ಮಹಾರಾಜ. —(ಇನ್ನೂ ಇದೆ)



Scanned by CamScanner



# ಢಕಾಯಿತ ಯುವರಾಜ

## ೧೨

[ ಜಯಾನಂದ ಮುನಿಯ ಆಶ್ರಮದಲ್ಲಿ ಬೆಳೆಯುತ್ತಿರುವ ತನ್ನ ಪುತ್ರನನ್ನು ಶಾಂತಿದೇವ ರಾಜನು ನೋಡಿದನು. ದಿನದಿನಕ್ಕೆ ಬೆಳೆಯುತ್ತಿರುವ ವೀರಸಿಂಹನ ದುಷ್ಟ ಸ್ವೇಚ್ಛಾಚಾರವನ್ನು ತಡೆಯಲು ವಸಂತನ ಮುಖಂಡತ್ವದಲ್ಲಿ ಹೋರಾಟ ನಡೆಸುವ ಸುಮೇಧ ರಾಜ್ಯದ ಯುವಕರನ್ನು ಸರಿಹದ್ದು ಪ್ರಾಂತ್ಯದ ಅರಣ್ಯದೊಳಗೆ ತಂದು ಕೂಡಿಸಿಕೊಳ್ಳುವುದು ಒಳ್ಳೆಯದೆಂದು ಜಯಾನಂದ ಮುನಿ ರಾಜನಿಗೆ ಹೇಳಿದನು. —ಹೀಗಿರುವಾಗ ]

ದಿಢೀರನೆ ರಾಜಸಿಂಹಾಸನವನ್ನೇರಿದ ವೀರಸಿಂಹನು ತನ್ನ ಉದ್ದೇಶಕ್ಕೆ ಭಂಗಗಳುಂಟಾಗಿ ಅದರಿಂದಾದ ಕಷ್ಟನಷ್ಟಗಳನ್ನು ತುಂಬಲು, ನೆರೆಹೊರೆ ರಾಜ್ಯಗಳ ಸಂಪತ್ತುಗಳನ್ನು ದೋಚಿಕೊಂಡು ಬೇಕಾದಷ್ಟು ಧನ ಸಹಾಯ ಗಳಿಸಿ ವಿಜಯಶಾಲಿಯಾಗುವೆನೆಂಬ ಕನಸು ಕೂಡಾ ಕನಸಾಗಿಯೇ ಉಳಿದುಹೋಯಿತು. ಕಡೆಗೆ ಸುಮೇಧ ರಾಜ್ಯದೊಳಗೇ ಸಿಕ್ಕಿದಷ್ಟು ದೋಚಿ ತರುವಂತೆ ಭಟರಿಗೆ ಆಜ್ಞೆ ಮಾಡಿದನು.

ಆ ಕೆಲಸವೂ ನೆನೆದಷ್ಟು ಸುಲಭವಾಗಿರಲಿಲ್ಲ. ಸುಮೇಧದ ಯುವಕರೇ ಸಿಡಿದೆದ್ದರು, ಉಕ್ಕುವ ಬಿಸಿರಕ್ತದ ಯುವಕರಿಂದ ಸಿಕ್ಕಿದ ಕಲ್ಲು ದೊಣ್ಣೆ ಮೊದಲಾದ ಆಯುಧಗಳು ಬೀಸಲ್ಪಟ್ಟುವು.

ಹೀಗೆಲ್ಲಾ ಬಂಡಾಯವೆಬ್ಬಿಸುವವರ ಮೂಲ ರಹಸ್ಯ ಸ್ಥಾನವನ್ನು ಶೋಧಿಸಲು ಅನೇಕ ವಿಧದಲ್ಲಿ ಪ್ರಯತ್ನಗಳು ತೊಡಗಿದುವು. ಸೇನಾಧಿಪತಿ ಕಪಾಲ ಕಂಕನೂ ಸ್ವತಃ ವೀರಸಿಂಹನೂ ಶೋಧನೆ ನಡೆಸಲು ತೊಡಗಿದರು. ಏನೂ ಪ್ರಯೋಜನವಾಗದೆ ಬೇಸರವೇ ಉಳಿಯಿತು. ಏಕೆಂದರೆ ಆ ಯುವಕರೆಲ್ಲಾ ಅರಣ್ಯದೊಳಗೆ ಒಂದೇ ಕಡೆಯಲ್ಲಿರದೆ, ಅರಣ್ಯದ ಬೇರೆ ಬೇರೆ ಕಡೆಗಳಲ್ಲಿ ಅಡಗಿದ್ದರು. ನಿರ್ಣಯಿಸಲ್ಪಟ್ಟ




ಸಮಯದಲ್ಲಿ ಅನುಕೂಲವಾದ ಕಣಿವೆಯ ಪ್ರದೇಶದಲ್ಲಿ ಕಲೆತುಕೊಳ್ಳುತ್ತಿದ್ದರು. ಕೆಲಸವಾದ ಕೂಡಲೇ ಚದರಿ ಹೋಗುತ್ತಿದ್ದರು. ಹಾಗೆ ಅವರು ಕಲೆತುಕೊಳ್ಳುವ ಸ್ಥಳದಲ್ಲಿ ಸುತ್ತಲೂ ಗುಡ್ಡಗಳಿವೆ. ಅವುಗಳ ನಡುವೆ ಅಲ್ಲಲ್ಲಿ ಹರಿಯುವ ತೊರೆಗಳು, ಸಣ್ಣ ಸಣ್ಣ ನೀರೋಳಿಗಳು, ಹೀಗಿರುವ ಆ ಪ್ರದೇಶವು ಕಣಿವೆಗಳ ಹಾಗೆ ಕಂಡರೂ, ಕಷ್ಟಸಾಧ್ಯವಾದ ಕಣಿವೆಗಳಾಗಿರದೆ, ಮೊತ್ತದಲ್ಲಿ ಬಹು ವಿಸ್ತಾರವಾದ ಮೈದಾನವೇ ಆಗಿತ್ತು. ಅಲ್ಲಲ್ಲಿ ಸುಲಭಸಾಧ್ಯವಾದ ಹಸಿರು ಹುಲ್ಲಿನ ಇಳಿಜಾರುಗಳಿದ್ದುವು. ಸುಲಭದಲ್ಲಿ ಯಾರಿಗೂ ಕಾಣುವ ಜಾಗೆಯಲ್ಲ. ಅಂತಹ ವಿಸ್ತಾರವಾದ ಕಣಿಯಲ್ಲಿ ಪ್ರಕೃತಿ ಸಿದ್ಧವಾದ ಗುಹೆಗಳೂ, ಸುರಂಗಗಳೂ ಇದ್ದುವು. ಅಗತ್ಯಬಿದ್ದಾಗ ಅವುಗಳೊಳಗೆ ಅಡಗಿಕೊಳ್ಳಬಹುದು. ಅದರೊಳಗೆ ಪ್ರವೇಶಿಸಲು ಪಡುಗಡೆ ಮತ್ತು ಮೂಡುಗಡೆಗಳಲ್ಲಿರುವ ಬಂಡೆಗಳ ಎಡೆಯೇ ದ್ವಾರಗಳು.

ಬಂಡಾಯವೆದ್ದವರು ವಾರಕ್ಕೊಂದು ದಿನ ಅಲ್ಲಿ ಒಂದಾಗಿ ಕಲೆತುಕೊಳ್ಳುವರು. ಅಮೃತಪುರಿಯಲ್ಲಿ ಶರಣಾರ್ಥಿಗಳಾಗಿ ನೆಲೆನಿಂತುಹೋದ ವೀರಸಿಂಹನೆಂದರೆ ರೋಸಿಕೊಂಡಿದ್ದ ಸೈನಿಕರು ಕೆಲವರನ್ನು ಈ ಕಣಿವೆಗೆ ಕರೆಯಿಸಿ, ಅವರ ಮೂಲಕ ಬಂಡಾಯವೆದ್ದ ಯುವಕರು ಯುದ್ಧ ವಿದ್ಯೆಯ ಶಿಕ್ಷಣ ಪಡೆಯುತ್ತಿದ್ದರು.

ಅಂತಹ ಯುವಕರು ಪ್ರತ್ಯಪ್ರತ್ಯೇಕವಾಗಿ ಊರೊಳಗೆ ಒಬ್ಬರಿಗೊಬ್ಬರ ಸಂಬಂಧವಿಲ್ಲದವರಂತೆ, ಸನ್ಯಾಸಿಗಳಾಗಿ, ವ್ಯಾಪಾರಿಗಳಾಗಿ, ಕೂಲಿಯಾಳುಗಳಾಗಿ, ಪರದೇಶಗಳಿಂದ ಬಂದ ಯಾತ್ರಿಕರಾಗಿ ವೇಷಗಳನ್ನು ಧರಿಸಿ, ಸುಮೇಧ ರಾಜ್ಯದೊಳಗಿನ ರಾಜಧಾನಿಯಾದ ಶಾಂತಿಪುರದಲ್ಲಿಯೂ, ಗ್ರಾಮಗಳಲ್ಲಿಯೂ ತಿರುಗಿಕೊಂಡಿರುವರು. ವೀರಸಿಂಹನ ಸೈನಿಕರು ಯಾರನ್ನಾದರೂ, ಅಥವಾ ಎಲ್ಲಿಯಾದರೂ ದೋಚುವ ಸನ್ನಾಹಕ್ಕೆ ತೊಡಗಿದ ಕೂಡಲೇ ಅವರ ಸಂಕೇತ ಶಬ್ದವು ಕಾಡಿನವರೆಗೆ ಒಬ್ಬರಿಂದೊಬ್ಬರಿಗೆ ಅಂತರಾಯುತವಾಗಿ ಕೇಳಿಸಿಬಿಡುತ್ತದೆ. ವಸಂತನು ತನ್ನ ಅನುಯಾಯಿಗಳನ್ನು ಸಣ್ಣ ಸಣ್ಣ ಗುಂಪುಗಳಾಗಿ ನಾಲ್ಕು ದಿಕ್ಕುಗಳಲ್ಲಿಯೂ ಇದ್ದವರು ವೀರಸಿಂಹನ ಭಟರು ದೋಚಿದವುಗಳನ್ನು ತಾವು ದೋಚಿಕೊಂಡು ಹೋಗಿಬಿಡುತ್ತಿದ್ದರು. ವೀರಸಿಂಹನ ಸೈನಿಕರಿಗೆ ಏನೂ ಸಿಗುತ್ತಿದ್ದಿಲ್ಲ. ದೋಚಲ್ಪಟ್ಟ ಮನೆಗಳಿಗೇ ಅವು ಮತ್ತೆ ಸೇರುತ್ತಿದ್ದವು.

ಈ ರೀತಿಯಲ್ಲಿ ಎಂಟು ವರ್ಷಗಳು ಕ್ರಮಿಸಿದುವು. ಸುಮೇಧ ಪ್ರಜೆಗಳ ಅವಸ್ಥೆ ತುಂಬಾ ಅನಿಶ್ಚಿತವಾದ ಸ್ಥಿತಿಗೆ ಬಂದಿತ್ತು. ಯಾವ ದಿನ ಯಾವ ಹೊತ್ತಿನಲ್ಲಿ ಯಾರ ಮನೆಗೆ ಸೈನಿಕರ ದಾಳಿಯಾಗುತ್ತದೋ ಎಂಬಂತಿತ್ತು. ಪ್ರಜೆಗಳಿಗೆ ಸರಿಯಾದ ನಿದ್ರೆಯೇ ಇಲ್ಲದೆ, ಸದಾಕಾಲವೂ ಪರಿತಪಿಸುವುದರಲ್ಲೇ ಕಳೆಯುತ್ತಿತ್ತು. ಇದರಿಂದ ಆರೋಗ್ಯವೂ ಕೆಡುತ್ತಿತ್ತು.



Scanned by CamScanner

ಹಾಗಿದ್ದ ಕಾಲದಲ್ಲಿ ಒಂದು ದಿನ ವಸಂತನು ಉದ್ದವಾದ ಗಡ್ಡದಿಂದ, ಜಡೆಗಟ್ಟಿದ ತಲೆಗೂದಲುಗಳಿಂದ ದೊಡ್ಡ ಸಾಧುವಿನ ಹಾಗೆ ವೇಷ ಹಾಕಿಕೊಂಡು ಕಪಾಲಕಂಕನ ಪ್ರಧಾನ ಸೈನಿಕ ಶಿಬಿರದ ಇದಿರಿನಲ್ಲಿ ಕುಳಿತಿದ್ದನು. ಹಚ್ಚಹಗಲಿನಲ್ಲಿ ಅಷ್ಟು ಧೈರ್ಯದಿಂದ ಸೈನಿಕ ಶಿಬಿರದ ಹತ್ತಿರ ಬಂದ ವಸಂತನನ್ನು ಯಾರೂ ಅನುಮಾನಿಸಲಿಲ್ಲ. ಯಾವ ಗೂಢಚಾರಿಗೂ ಸೇನಾಪತಿಯ ಹತ್ತಿರ ಬರಲು ಹೇಗೆ ಧೈರ್ಯವಾದೀತೆಂದು ನೋಡಿದವರು ಅಂದುಕೊಳ್ಳುತ್ತಿದ್ದರು.

ಅಲ್ಲಿ ಗಸ್ತೀ ತಿರುಗಿಕೊಂಡಿದ್ದ ಒಬ್ಬ ದಳನಾಯಕನು ವಸಂತನನ್ನು ನೋಡಿ ನಿಜವಾದ ಸಾಧು ಎಂದುಕೊಂಡು, ಹತ್ತಿರ ಬಂದು ವಿನಮ್ರತೆಯಿಂದ ನಮಸ್ಕಾರ ಮಾಡಿ, "ಮಹಾತ್ಮರೆ, ತಮಗೆ ಹಸ್ತ ಸಾಮುದ್ರಿಕ ಗೊತ್ತಿದೆಯೆ? ನನ್ನ ಕೈ ನೋಡುವಿರಾ?" ಎಂದು ಕೇಳಿದನು.

"ಗೊತ್ತಿದೆಯಪ್ಪಾ, ಲೋಕೋಪಕಾರಕ್ಕಾಗಿ ಹೇಳುತ್ತೇನಲ್ಲದೆ ಪ್ರತಿಫಲಕ್ಕಾಗಿ ಅಲ್ಲ" ಎಂದನು ವಸಂತ ಒಂದು ಬಗೆಯ ಗಂಭೀರ ಧ್ವನಿಯಲ್ಲಿ.

"ದಯಮಾಡಿ ತಾವು ನನ್ನ ಮನೆಗೆ ಬಂದು ನನ್ನ ಹಸ್ತರೇಖೆಗಳನ್ನು ಪರಿಶೀಲನೆ ಮಾಡಿ, ನನ್ನ ಭವಿಷ್ಯತ್ತು ಸ್ವಲ್ಪ ಹೇಳುವಿರಾ? ಈ ದಿನ ನಿಮ್ಮ ಫಳಾರ ಅಲ್ಲಿಯೇ ಆಗುತ್ತದೆ, ಅಷ್ಟೇ" ಎಂದನು.

"ಮಾನವಾಭೀಷ್ಟವೇ ನನ್ನ ಅಭೀಷ್ಟ. ಇತರರ ಅಭೀಷ್ಟ ಸಿದ್ಧಿರಸ್ತು ಎನ್ನುವುದಕ್ಕಿಂತ ನನ್ನಂಥವನಿಗೆ ಬೇರೆ ಸೇವೆ ಏನಿದೆ? ಕೈರೇಖೆಗಿಂತ ಸ್ಪಷ್ಟವಾದ ಭವಿಷ್ಯಸೂಚೀ ಇನ್ನೊಂದಿಲ್ಲ. ನೀರೇ ನನ್ನ ಆಹಾರವಪ್ಪಾ. ಬೇರೇನೂ ಬೇಡ. ನಡೆ, ಹೋಗೊಣ" ಎನ್ನುತ್ತಾ ಎದ್ದನು ವಸಂತ.

ಅವನೊಂದಿಗೆ ಹೋದರೆ ಏನಾದರೂ ರಹಸ್ಯಗಳು ತಿಳಿಯಬಹುದೆಂದು ವಸಂತನ ಆಶಯ. ಮನೆಗೆ



ಬಂದಾಗ, ಮನೆಯ ಮಾಡಿನಿಂದ ನೇತಾಡುವ ಸಣ್ಣಗಿನ ಒಂದು ಕೊಕ್ಕೆಗೆ ವಸಂತನ ತಲೆ ತಗಲಿ, ಇಟ್ಟುಕೊಂಡಿದ್ದ ದೊಡ್ಡ ಜಡೆ ಜುಟ್ಟು ಸ್ವಲ್ಪ ಮಾತ್ರ ಸಿಕ್ಕಿಕೊಂಡಿತು! ಅದು ಪೂರ್ತಿ ಅಲುಗಿದ್ದು ನೋಡಿ, ದಳನಾಯಕನು ಅದುರಿಬಿದ್ದು ನೆತ್ತಿಯವರೆಗೆ ಕಣ್ಣರಳಿಸಿ, "ಓಹ್! ಕಳ್ಳ ಸನ್ಯಾಸಿಯೇ! ಯಾರು ನೀನು?" ಎಂದು ಗದರಿಸಿ ಕೇಳಿ ಒರೆಗೆ ಕೈಹಾಕಿದನು.

ಇನ್ನು ಅವನೊಡನೆ ಮಾತಾಡಿ ಪ್ರಯೋಜನವಿಲ್ಲವೆಂದುಕೊಂಡ ವಸಂತನು ಅಲ್ಲಿಂದ ಓಡಲು ತೊಡಗಿದನು.

"ಹಿಡೀರೋ! ಆ ಗೂಢಚಾರಿಯನ್ನು ಹಿಡೀರೋ!..." ಎಂದು ಕೂಗುತ್ತ ವಸಂತನ ಹಿಂದೆ ಆ ದಳನಾಯಕನು ಓಡತೊಡಗಿದನು. ಹೀಗೆ ಸ್ವಲ್ಪ ದೂರ ಓಡಿದರು. ದಳನಾಯಕನ ಹಿಂದೆ ಮತ್ತಿಬ್ಬರು ಭಟರು ಓಡುತ್ತಿದ್ದರು. ವಸಂತನನ್ನು



ಹಿಡಿಯಲು ಅವರಿಂದಾಗಲಿಲ್ಲ. ಅವರಿಗೆ ಇದಿರಾಗಿ ಕುದುರೆಯ ಮೇಲೆ ಯಾವನೋ ಒಬ್ಬನು ವೇಗವಾಗಿ ಬರುವುದು ಕಂಡಿತು. ಅವನೊಬ್ಬ ಸೇನಾ ದಳ ನಾಯಕನ ಹಾಗೆ ಕಾಣುತ್ತಿದ್ದನು.

ದಳನಾಯಕನು ಅವನನ್ನು ಉದ್ದೇಶಿಸಿ, "ಏ ? ಏ ! ಆ ಓಡುವವನನ್ನು ಹಿಡಿ ! ನಿನಗೆ ಬಹುಮಾನ ಕೊಡುತ್ತೇನೆ ! " ಎಂದು ಅರಚಿ ಹೇಳಿದನು.

ಕುದುರೆಯ ಮೇಲೆ ಬರುವವನು ಸಮೀಪಿಸಿದಾಗ ಒಬ್ಬ ರಾಜೋದ್ಯೋಗಿಯಂತೆ ದಳನಾಯಕನಿಗೆ ಕಂಡಿತು. ಆ ಮುಸುಗು ಮುಖದವನು ಒಂದೇ ಹಾರಿಕೆಗೆ ವಸಂತನನ್ನು ಸಮೀಪಿಸಿ, "ವೇಗವಾಗಿ ಓಡಿ ನದಿಯನ್ನು ದಾಟಬಿಡು. ಇವರನ್ನು ನಾನು ನೋಡಿ ಕೊಳ್ಳುತ್ತೇನೆ" ಎಂದು ಹೇಳಿ, ಕುದುರೆಯನ್ನು ಹಿಂದಿರುಗಿಸಿ, "ನಿಲ್ಲಲ್ಲಿ ! ಅವನನ್ನು ಹಿಡೀಬೇಡ ! " ಎಂದು ದಳನಾಯಕನ ಮೇಲೆ ಕೊರಡೆಯನ್ನು ಬೀಸಿ ಹೊಡೆದನು.

ಆ ಒಂದೇ ಪೆಟ್ಟಿಗೆ ದಳನಾಯಕನು ನೆಲಕ್ಕೆ ಬಿದ್ದನು. ಅವನ ಹಿಂದೆಯೇ ಬಂದ ಇಬ್ಬರು ಸೈನಿಕರು ಅವನನ್ನು ಎಬ್ಬಿಸಲಿಕ್ಕೆ ಓಡಿಬಂದರು.

ಮುಸುಗಿನವನು ಕುದುರೆಯನ್ನು ಮತ್ತೆ ಹಿಂದಕ್ಕೆ ತಿರುಗಿಸಿ, ನಾಗಾಲೋಟ ತೆಗೆಯಿಸಿ ನಂದಿನೀ ನದಿಯ ತೀರಕ್ಕೆ ಮುಟ್ಟಿದನು.

ಅದೇ ವೇಗದಲ್ಲಿ ಹೆಚ್ಚಿನ ಆಳವಿಲ್ಲದೆ ಹರಿಯು ತ್ತಿದ್ದ ನದಿಯನ್ನು ಅವನ ಕುದುರೆಯು ಮಿಂಚಿನ ವೇಗದಲ್ಲಿ ದಾಟಿತು.

ಅಷ್ಟರೊಳಗೆ ನದಿಯಲ್ಲಿ ಈಜುತ್ತಾ ದಾಟಿ ಆಚೆಯ ತೀರವನ್ನು ಏರುತ್ತಿದ್ದ ವಸಂತನಿಗೆ ಮುಸುಗಿ ನವನು ತನ್ನ ಕೈಯನ್ನು ಚಾಚಿದನು. ಆಗ ಅವನ ಮುಸುಗು ಒಂದು ಬದಿಗೆ ಜಾರಿಕೊಂಡಿತು.

ಮರುಕ್ಷಣವೇ ವಸಂತನು ಅವನ ಪಾದಗಳ ಮೇಲೆ ಬಿದ್ದು, "ಮಹಾಪ್ರಭೂ ! ನನ್ನ ಪ್ರಾಣವನ್ನು ಅನೇಕಸಾರಿ ಕಾಪಾಡಿದವರು ತಾವೇ ಆಗಿರಬಹು ದೆಂದು ಊಹಿಸಿಕೊಂಡಿದ್ದೆ. ಈ ದಿನವೂ ತಮ್ಮ ಕೈಯಲ್ಲೇ ರಕ್ಷಿಸಲ್ಪಟ್ಟೆನು. ತಾವೇ ಎಂಬ ತಮ್ಮ ಮುಖದರ್ಶನದ ಸೌಭಾಗ್ಯವು ಈ ದಿನ ನನಗಾಯಿತು. ನನ್ನ ಊಹೆ ನಿಜವಾಯಿತು ! ನನ್ನ ಅದೃಷ್ಟವೇ ಅದೃಷ್ಟ ! " ಎಂದನು ಆನಂದಬಾಷ್ಪ ಉದುರಿಸುತ್ತ.

ರಾಜನು ಅವನನ್ನು ಆಪ್ಯಾಯತೆಯಿಂದ ಎಬ್ಬಿಸಿ, "ವಸಂತಾ, ನಿನ್ನ ಧೈರ್ಯ ಸಾಹಸಗಳೂ, ಕಾರ್ಯ ದೀಕ್ಷೆಯೂ, ಶ್ಲಾಘನೀಯವಾಗಿವೆ. ನಿನ್ನಂಥ ಪ್ರಜೆಗಳ ಮೇಲೆ ನಿನಗಿರುವ ಪ್ರೇಮಾಭಿಮಾನಗಳು ತುಂಬಾ ಉದಾತ್ತವಾಗಿವೆ. ಒಂದು ಮುಖ್ಯ ಸಂಗತಿ ನೀನು ನೆನಪಿಟ್ಟು ನಡೆಯಬೇಕು. ನಾನು ಜೀವದಿಂದಿರುವೆ ನೆಂಬುದನ್ನು ಮಾತ್ರ ಯಾರಿಗೂ ತಿಳಿಸಬೇಡ ! ನೆನಪಿಟ್ಟುಕೋ ! " ಎಂದನು.

ವಸಂತನು ಆಶ್ಚರ್ಯದಿಂದ, "ಅದೇಕೆ ಮಹಾ ಪ್ರಭೂ ? " ಎಂದನು.

"ಗೊತ್ತಾಗಿಬಿಟ್ಟರೆ ಪ್ರಜೆಗಳಲ್ಲಿ ಅಶಾಂತಿಯು ಹೆಚ್ಚಾಗುತ್ತದೆ. ನನ್ನನ್ನು ಹಿಡಿಯಬೇಕೆಂಬುದಕ್ಕಾಗಿ ದ್ರೋಹಿ ವೀರಸಿಂಹನು ಇನ್ನಷ್ಟು ಹುಚ್ಚಾಟಕ್ಕೆ ತೊಡಗುವನು. ಆದರಿಂದ ಪ್ರಜೆಗಳಾರಿಗೂ ಸುಖವಾಗದು" ಎಂದನು ರಾಜ.

"ಮಹಾಪ್ರಭೂ, ಪ್ರಜೆಗಳ ಕ್ಷೇಮಕ್ಕಾಗಿ ಹೋರಾಡುತ್ತಿರುವ ನನ್ನಂಥ ಯುವಕರಿಗಾದರೂ ತಾವು ಇರುವಿರೆಂದು ತಿಳಿದರೆ ಇನ್ನಷ್ಟು ಉತ್ಸಾಹಿಗಳಾಗಿರುತ್ತಾರೆ. ಆದ್ದರಿಂದ ಅವರಿಗಾದರೂ ತಿಳಿಯಬೇಕಾದ್ದು ಅಗತ್ಯವೇ. ಮಹಾರಾಜರಿಗಾಗಿ ಏನು ಮಾಡಲಿಕ್ಕೂ ಸಿದ್ಧರಾಗುತ್ತಾರೆ. ಧರ್ಮಪ್ರಭುಗಳಾದ ತಮಗಾಗಿ ಹೋರಾಡುವುದೆಂದರೆ ಎಷ್ಟು ಉತ್ಸಾಹವಿರುತ್ತದೆ! ಎಷ್ಟು ಬಲ ಬರುತ್ತದೆ! ನಿಮ್ಮನ್ನು ಪ್ರಾರ್ಥಿಸಿಕೊಳ್ಳುತ್ತೇನೆ. ದಯಮಾಡಿ ಒಂದೇ ಒಂದುಸಾರಿ ಎಲ್ಲರಿಗೂ ತಮ್ಮ ಮುಖದರ್ಶನ ಮಾಡಿಸಿಬಿಡಿ! ಆಮೇಲೆ ನೀವೇ ನಮ್ಮನ್ನು ನಡೆಸಬೇಕು. ಆ ಹಾಳು ವೀರಸಿಂಹನ ಭಟರೊಂದಿಗೆ ಇನ್ನೆಷ್ಟು ದಿನ ಈ ಕಣ್ಣುಮುಚ್ಚಾಲೆ ಪ್ರಭೂ? ಪ್ರಜೆಗಳ ಪರಿಸ್ಥಿತಿ ತುಂಬಾ ದಯನೀಯವಾಗಿದೆ. ಇದಕ್ಕೆ ಅಂತ್ಯ ಬರಲೇಬೇಕು. ಆ ದುಷ್ಟನನ್ನು ಗದ್ದುಗೆಯಿಂದ ಇಳಿಸಲೇಬೇಕು" ಎಂದನು ಆವೇಶದಿಂದ.

ಶಾಂತಿದೇವ ರಾಜನು ಸ್ವಲ್ಪಹೊತ್ತು ಆಲೋಚನೆ ಮಾಡಿ, "ನೀನು ಹೇಳಿದ್ದು ನಿಜವೇ. ನಮ್ಮ ಅಭಿಮಾನೀ ಯುವಕರನ್ನೆಲ್ಲಾ ಒಟ್ಟಾಗಿ ಕೂಡಿಸಿ, ಅಮೃತಪುರಿಯ ಸೈನಿಕರ ಸಹಾಯದಿಂದ ವೀರಸಿಂಹನ ದುಷ್ಟ ಪರಿಪಾಲನೆಗೆ ತುದಿ ಕಾಣಿಸಬೇಕು. ಅದಕ್ಕಾಗಿ ದುಡುಕಿ ಏನಾದರೂ ಮಾಡಬಾರದು. ಅದಕ್ಕೇ ಹಾಗೆ ಎಚ್ಚರಿಕೆ ಹೇಳಿದೆ" ಎಂದನು.

ವಸಂತನ ಮುಖವು ಆನಂದದಿಂದ ಇಷ್ಟಗಲವಾಯಿತು. ಅವನು ಮತ್ತೊಂದುಸಾರಿ ಶಾಂತಿದೇವ ಮಹಾರಾಜನ ಪಾದಕ್ಕೆ ಬಿದ್ದಿದ್ದನು. ಹಾರಿ ಹಾರಿ ಕುಣಿಯುವುದೊಂದೇ ಬಾಕಿಯಾಗಿತ್ತು!



* * *

ಅದೊಂದು ಹುಣ್ಣಿಮೆಯ ದಿನ. ವಸಂತನ ಅನುಚರರು ನೂರು ಮಂದಿ ಯುವಕರು ತಮ್ಮ ರಹಸ್ಯ ಸ್ಥಾವರವಾದ ಕಣಿಮೆಯ ಪ್ರದೇಶದಲ್ಲಿ ಗುಂಪುಗೂಡಿ, ಮಹಾರಾಜರ ಬರುವಿಕೆಗಾಗಿ ಕಾದುಕೊಂಡಿದ್ದರು.

ಇದ್ದಕ್ಕಿದ್ದ ಹಾಗೆ ಒಂದು ಬಂಡೆಯ ಮರೆಯಿಂದ "ವಸಂತಾ!" ಎಂದೊಂದು ಕರೆ ಹೊರಟಿತು.

ಅದು ಮಹಾರಾಜರ ಕಂಠಸ್ವರವೆಂದು ಗುರುತಿಸಿದ ವಸಂತನು, ಆ ಬಂಡೆಯ ಹತ್ತಿರ ಹೋದನು. ಅಲ್ಲಿ ರಾಜನನ್ನು ನೋಡಿ, "ಮಹಾಪ್ರಭೂ!" ಎಂದು ನಮಸ್ಕಾರ ಮಾಡಿದನು.

"ಈಗ ಅಪಾಯವು ನಮ್ಮನ್ನು ಮುಳುಗಿಸಲು ಬರುತ್ತಾ ಇದೆ. ಹೇಗೋ ನಮ್ಮ ಸುದ್ದಿ ಗೊತ್ತಾಗಿ



ಬಿಟ್ಟಿದೆ ! ಇಲ್ಲಿ ಒಂದು ಕ್ಷಣ ಕೂಡಾ ತಡಮಾಡಬಾರದು. ಈ ಕಣಿವೆಯ ಕಡೆಗೆ ವೀರಸಿಂಹ ಸೈನ್ಯಗಳು ಬರುತ್ತಾ ಇವೆ. ಎರಡು ಕಡೆಗಳಿಂದ ಬರುತ್ತಾ ಇವೆ. ಆದ್ದರಿಂದ ಎರಡು ಕಡೆಯ ದ್ವಾರಗಳನ್ನೂ ಬಂದು ಮಾಡಿ, ನಿಮ್ಮಲ್ಲಿ ಒಬ್ಬರು ಕೂಡಾ ತಪ್ಪಿಸಿಕೊಳ್ಳಲಾಗದಂತೆ ಹತಗೊಳಿಸಬೇಕೆಂದಿದ್ದಾನೆ ವೀರಸಿಂಹ. ಸೈನ್ಯಗಳನ್ನು ಸೇರಿಸಿಕೊಂಡು ಬರುತ್ತಿದ್ದಾನೆ ಕಪಾಲಕಂಕ. ಈಗ ಅವರು ಕಣಿವೆಯ ಪಶ್ಚಿಮ ದ್ವಾರದ ಹತ್ತಿರ ಬರುತ್ತಿದ್ದಾರೆ. ಮೂಡು ದಿಕ್ಕಿನ ದ್ವಾರದ ಹತ್ತಿರ ಬರಲು ಸ್ವಲ್ಪ ಹೊತ್ತಾದೀತು ! ನಾನು ಪಶ್ಚಿಮ ದ್ವಾರದ ಹತ್ತಿರ ನಿಂತುಕೊಂಡು ಅವರು ಒಳಕ್ಕೆ ಬಾರದಂತೆ ನೋಡಿಕೊಳ್ಳುತ್ತೇನೆ. ಅಷ್ಟರೊಳಗೆ ನೀವೆಲ್ಲರೂ ಪೂರ್ವ ದ್ವಾರದಿಂದ ತಪ್ಪಿಸಿಕೊಂಡು ಹೋಗಿಬಿಡಿರಿ. ಉಂ, ತಡಮಾಡಬೇಡಿರಿ. ಈಗಲೇ ಹೊರಡಿರಿ !" ಎಂದು ಆಜ್ಞೆ ಮಾಡಿದನು.

ಪರಿಸ್ಥಿತಿ ವಿಷಮಿಸಿತೆಂದು ವಸಂತನಿಗೆ ತಿಳಿಯಿತು. ವೀರಸಿಂಹನ ಪಥಕದಂತೆ ಕೆಲಸವಾಗಿ ಬಿಟ್ಟರೆ ಬಂಡಾಯಗಾರರ ಇತಿಶ್ರೀಯಾಗಿ ಬಿಡುತ್ತದೆ ! ಆದುದರಿಂದ ವಸಂತನು ತನ್ನ ಅನುಯಾಯಿಗಳ ಕಡೆಗೆ ತಿರುಗಿ ಬಂದು, "ಈ ಕ್ಷಣವೇ ನೀವೆಲ್ಲರೂ ಮೂಡುಗಡೆಯ ದ್ವಾರದಿಂದ ಸುರಕ್ಷಿತ ಪ್ರಾಂತಕ್ಕೆ ಹೋಗಿಬಿಡಿರಿ ? ಪ್ರಶ್ನೋತ್ತರಕ್ಕೆ ಸಮಯವಿಲ್ಲ ! ಎಲ್ಲರೂ ಏಳಿರಿ !" ಎಂದು ಅಪ್ಪಣೆ ಮಾಡಿದನು.

ಮರುಕ್ಷಣವೇ ಎಲ್ಲಾ ಯುವಕರೂ ಕಣಿವೆಯ ಮೂಡು ದಿಕ್ಕಿನ ದ್ವಾರದ ಕಡೆಗೆ ಸಾಗಿದರು. ವಸಂತನು ಮಾತ್ರ ಏನೋ ನಿಶ್ಚಯ ಮಾಡಿಕೊಂಡವನಂತೆ ರಾಜನ ಹತ್ತಿರ ಹೋಗಿ ನಿಂತನು.

"ನೀನೇಕೆ ಹೋಗಲಿಲ್ಲ ?" ಎಂದು ಕಟುವಾಗಿ ಕೇಳಿದನು ರಾಜ.

"ನನ್ನ ಪ್ರಾಣ ಹೋದರೂ ಸರಿಯೇ, ನಿಮ್ಮೊಬ್ಬರನ್ನೇ ಇಲ್ಲಿ ಬಿಟ್ಟು ಹೋಗಲಾರೆ ! ಕ್ಷಮಿಸಿ ಮಹಾರಾಜರೇ !" ಎಂದನು ವಸಂತ ದೃಢ ಸ್ವರದಲ್ಲಿ.

ಅಷ್ಟರೊಳಗೇ ಕಣಿವೆಯ ಪಶ್ಚಿಮ ದ್ವಾರದ ಹತ್ತಿರ ಶತ್ರು ಸೇನೆಗಳ ಶಬ್ದ ಕೇಳತೊಡಗಿತು.

ರಾಜನು ಕತ್ತಿ ಹಿರಿದು ದ್ವಾರದ ಅಡ್ಡದಲ್ಲಿ ನಿಂತನು. ದ್ವಾರದಂತಹ ಹೆಬ್ಬಂಡೆಗಳ ಎಡೆ ಬಹಳ ಇಕ್ಕಟ್ಟಾಗಿದ್ದುದರಿಂದ ರಾಜನ ಹಿಂದೆಯೇ ವಸಂತನು ಬಿಚ್ಚುಗತ್ತಿಯೊಂದಿಗೆ ನಿಂತನು.

"ಇದೇ ನಾನು ಕಂಡುಹಿಡಿದ ಪಶ್ಚಿಮದ ದಾರಿ. ನುಗ್ಗಿರಿ ! ಒಳಗಿರುವವರನ್ನೆಲ್ಲಾ ಹುಲ್ಲು ಹರಿದ ಹಾಗೆ ಮಾಡಿಬಿಡಿ !" ಎಂದು ಕಪಾಲಕಂಕನು ಹಿಂದಿದ್ದ ಭಟರಿಗೆ ಆಜ್ಞೆ ಮಾಡಿ ತಾನು ಮಾತ್ರ ಬದಿಗೆ ಸರಿದನು.

ಕಣಿವೆಯೊಳಗೆ ಪ್ರವೇಶಿಸಲು ಒಂದಡಿ ಮುಂದಿಟ್ಟ ಮೊದಲನೇ ಸೈನಿಕನು ರಾಜನ ಕಾಲೊಡೆತದಿಂದ ಹಿಂದೆ ಮಗುಚಿ ಬಿದ್ದನು.



Scanned by CamScanner

ಕೂಡಲೇ ವಸಂತನು ರಾಜನ ಸೂಚನೆಯನ್ನನು ಸರಿಸಿ, "ಒಳಗೆ ಕಾಲಿಟ್ಟರೆ ಪ್ರಾಣ ಉಳಿಯದು. ಜಾಗ್ರತೆ!" ಎಂದು ಗುಹೆಯೊಳಗಿನ ಸಿಂಹದಂತೆ ಗರ್ಜಿಸಿ ಹೇಳಿದನು.

"ನೀ ನಾರೆಂದು ಗೊತ್ತಾಯಿತು ದುಷ್ಟ ವಸಂತಾ! ಇದೇ ನಿನ್ನ ಕಡೇ ರಾತ್ರಿ! ಅಲ್ಲ ಕಡೇ ಕ್ಷಣ!" ಎಂದು ಕೂಗಿ ಹೇಳುತ್ತ ಕಪಾಲಕಂಕನು ಮುಂದಕ್ಕೆ ಹಾರಿ ಬಂದನು. ದ್ವಾರದ ಹತ್ತಿರ ಕಾವಲಾಗಿದ್ದವರ ಹತ್ತಿರ ಆಯುಧವಿಲ್ಲವೆಂದು ಕಪಾಲಕಂಕನಿಗೆ ತೋರಿತ್ತು. ಆಯುಧವಿರುತ್ತಿದ್ದರೆ ಮೊದಲನೇ ಸೈನಿಕನನ್ನು ಕಡಿದು ಹಾಕದೆ, ಹಿಂದಕ್ಕೆ ಒದ್ದು ದೂಡುತ್ತಾನೆಯೆ? ಹೀಗೆ ಭಾವಿಸಿ ಅವನು ನಿರಾಯುಧನಾಗಿರುವ ವಸಂತನನ್ನು ಬಂಧಿಸಿ, ಅಥವಾ ಕೊಂದು ಬಿಟ್ಟರೆ ವೀರಸಿಂಹನಿಂದ ದೊಡ್ಡ ಮೆಚ್ಚುಗೆ ಪಡೆಯುಬಹುದೆಂದು ಕಪಾಲಕಂಕನು ಭಾವಿಸಿ ಒಳಗೆ ನುಗ್ಗಿದ್ದನು.

"ಕಪಾಲಕಂಕಾ! ಒಬ್ಬನ ಆಳಾದ ನಿನ್ನನ್ನು ಕೊಲ್ಲಲು ಇಷ್ಟವಿಲ್ಲ. ಗುಟ್ಟಾಗಿ ಹಿಂದೆ ಹೋಗು" ಎಂದು ಎಚ್ಚರಿಸಿದನು ವಸಂತ. ಅಷ್ಟರಲ್ಲೇ ಒಳಗೆ ಬಂದಿದ್ದ ಕಪಾಲಕಂಕನು ದ್ವಾರದಾಚೆಗೆ ಗುರಿ ನೋಡಿ ಈಟಿಯನ್ನು ಬಿಸುಟನು. ಆ ಈಟಿ ಅಲ್ಲೇ ಇದ್ದ ರಾಜನ ವಕ್ಷಸ್ಥಳದಲ್ಲಿ ಆಳಕ್ಕೆ ಚುಚ್ಚಿಕೊಂಡಿತು. ಹಾಗೆಯೇ ಕೆಳಗೆ ಒರಗಿದನು ರಾಜ. ನೆಲಕ್ಕೆ ಬಿದ್ದವನು ವಸಂತನೆಂದುಕೊಂಡು ಮುಂದಕ್ಕೆ ಹಾರಿದನು ಕಪಾಲಕಂಕ.

"ಪರಮ ಕಿರಾತಕಾ!" ಎಂದು ಕೂಗಿ ವಸಂತನು ಕತ್ತಿಯು ಒಂದೇಟಿಗೇ ಕಪಾಲಕಂಕನ ತಲೆಯನ್ನು ಕಡಿದು ಹಾರಿಸಿಬಿಟ್ಟನು. ಆ ತಲೆ ದೂರ ಹೋಗಿ ಸೈನಿಕರ ಮೇಲೆ ಬಿತ್ತು!

ಮರುಕ್ಷಣವೇ ಸೈನ್ಯದಲ್ಲಿ ಕಲಕಲರವವೆದ್ದಿತು. "ಸೇನಾಪತಿ ಸತ್ತನಪ್ಪೋ! ಕಪಾಲಕಂಕ ಸತ್ತನೋ! ಸತ್ತ!" ಎಂದು ಸೈನಿಕರೆಲ್ಲಾ ಹೆದರಿ ಹಾಹಾಕಾರ ಮಾಡುತ್ತಾ, ಒಬ್ಬರ ಮೇಲೊಬ್ಬರು ಬಿದ್ದೆದ್ದು ಕೊಂಡು ಚೆದರಿ ಎತ್ತೆತ್ತೋ ಓಡಿಹೋದರು.



ಮೂಡು ದಿಕ್ಕಿನಿಂದಾಗಿ ಕಣಿವೆಯೊಳಗೆ ಪ್ರವೇಶಿಸ ಬೇಕೆಂದಿದ್ದ ಸೈನಿಕರು, ನಿರಾತಂಕವಾಗಿ ಒಳಗೆ ಪ್ರವೇಶಿಸಿದರು ಆಗಲೇ ವಸಂತನ ಅನುಚರರೆಲ್ಲಾ ಹೊರಟು ಹೋಗಿದ್ದರಷ್ಟೆ? ಅಂತಲೇ ಅವರ ದಾರಿ ನಿರಾತಂಕವಾಗಿತ್ತು. ಆದರೆ ಅಲ್ಲೆಲ್ಲಿಯೂ ಯಾರೂ ಕಾಣದಿರಲು ಅವರೆಲ್ಲಾ ಬಂದ ದಾರಿಯಲ್ಲೇ ಹಿಂದಿರುಗಿ ಹೋಗಿ ಬಿಟ್ಟರು.

ಇಷ್ಟರಲ್ಲಿ ವಸಂತನು ರಾಜನನ್ನು ಹೊತ್ತುಕೊಂಡು, ಚಿಕ್ಕ ತೊರೆಯ ಹತ್ತಿರವಿದ್ದ ಗುಹೆಯೊಳಗೆ ಒಯ್ದು ಮೆಲ್ಲನೆ ಮಲಗಿಸಿ ಕುಡಿಯಲು ನೀರು ತಂದು ಬಾಯಿಗೆ ಹಿಡಿದನು. ಸೈನಿಕರೆಲ್ಲಾ ಹೊರಟುಹೋದರೆಂದು ನಿರ್ಧಾರವಾದ ಮೇಲೆ, ಅಲ್ಲಲ್ಲಿದ್ದ ಒಣ ಪುರುಳೆಗಳನ್ನು ಸೇರಿಸಿ ಬೆಂಕಿಯುರಿ ಮಾಡಿದನು.



Scanned by CamScanner

ರಾಜನು ವಸಂತನ ತೊಡೆಯ ಮೇಲೆ ತಲೆಯೊರಗಿಸಿ ಮಲಗಿಕೊಂಡು, "ವಸಂತಾ, ನನಗೆ ಮರಣ ಕಾಲವು ಬಂದಿದೆ. ಆದರೂ ನೀವು ಹೋರಾಟವನ್ನು ಮುಂದುವರಿಸಬೇಕು. ನನಗೆ ಅಧಿಕಾರದ ಮೇಲೆ ಆಕ್ಕರೆ ಏನಿಲ್ಲ. ಅದರಿಂದಲೇ ಇಷ್ಟು ಕಾಲ ನನ್ನ ಇರುವಿಕೆ ಯಾರಿಗೂ ತಿಳಿಯದ ಹಾಗೆ ಕಳೆದೆನು. ಆ ವೀರಸಿಂಹನಲ್ಲಿ ಬದಲಾವಣೆ ಬರುತ್ತದೆಂಬ ನಂಬುಗೆ ನನಗಿಲ್ಲ. ಅವನು ಪ್ರಜೆಗಳನ್ನು ದೋಚುವುದನ್ನು ಬಿಡಲಾರನು. ಅವನ ಪೀಡನೆಗಳಿಂದ ನಮ್ಮ ನಾಡಿನ ಪ್ರಜೆಗಳಿಗೆ ಬಿಡುಗಡೆಯಾಗಬೇಕು. ಆದ್ದರಿಂದ ನೀನು ಕೊನೆತನಕ ದ್ರೋಹಿ ವೀರಸಿಂಹನ ಮೇಲಿನ ದಂಗೆಯನ್ನು ಬಿಡಬಾರದು. ಇದೇ ನನ್ನ ಕೊನೆಯ ಸಂದೇಶ!" ಎಂದನು.

ರಾಜನ ವಕ್ಷಸ್ಥಳದ ಮೇಲೆ ವಸಂತನು ಬಟ್ಟೆಯ ಕಟ್ಟು ಹಾಕಿದ್ದನು. ಆದರೂ ರಕ್ತ ಸ್ರವಿಸುತ್ತಿದ್ದಿತು. ಅವನ ಕಂಠಸ್ವರ ಇನ್ನಷ್ಟು ನೀರಸವಾಗಿತ್ತು.

"ಮಹಾರಾಜರೇ, ನೀವೇ ತೀರಿಹೋದ ಮೇಲೆ ನಾವು ಯಾರಿಗಾಗಿ ಹೋರಾಡಬೇಕು? ಯಾರಿಗಾಗಿ ವೀರಸಿಂಹನನ್ನು ಗದ್ದುಗೆಯಿಂದಿಳಿಸಬೇಕು? ಯಾರಿಗೆ ತಾನೇ ಪಟ್ಟ ಕಟ್ಟುವುದು? ಯುವರಾಜನೂ ಇಲ್ಲವಲ್ಲಾ!" ಎಂದನು ರೋದನೆಯ ಧ್ವನಿಯಲ್ಲಿ ವಸಂತ.

"ವಸಂತಾ! ನಮ್ಮ ರಾಣಿ ಸತ್ತದ್ದು ನಿಜವೇ. ಆದರೆ ಅವಳು ಯುವರಾಜನಿಗೆ ಭದ್ರತೆಯನ್ನು ಏರ್ಪಡಿಸಿ, ಅತ್ಯಂತ ಸುಭದ್ರತೆಯಲ್ಲಿ ಇರಿಸಿ ಪ್ರಾಣ ಬಿಟ್ಟಿದ್ದಾಳೆ. ಒಬ್ಬ ಮುನಿಯ ಸಂರಕ್ಷಣೆಯಲ್ಲಿ ಯುವರಾಜನು ಕ್ಷೇಮವಾಗಿ ಬೆಳೆಯುತ್ತಿದ್ದಾನೆ. ಪ್ರಸ್ತುತದಲ್ಲಿ ಮುನಿಯ ರಕ್ಷಣೆಯಲ್ಲಿ ಬಹು ಚೆನ್ನಾಗಿದ್ದಾನೆ. ತಕ್ಕ ಕಾಲ ಬಂದಾಗ ನೀನೇ ಯುವರಾಜನಿಗೆ ನೆರಳಾಗಿರಬೇಕು. ಅದುವರೆಗೆ ನೀನೇ ಕಾಪಾಡಬೇಕು. ಪ್ರಜಾಕ್ಷೇಮವೇ ಪ್ರಧಾನ ಲಕ್ಷ್ಯವೆಂದು ಹೋರಾಡು!" ಎಂದನು ರಾಜ.

"ನಿಜಕ್ಕೂ ಯುವರಾಜರು ಕ್ಷೇಮವಾಗಿದ್ದಾರೆಯೆ? ಹಾಗಿದ್ದರೆ ಅವರಿಗಾಗಿ ನಾವು ನಮ್ಮ ಧೀರ ಕರ್ತವ್ಯ ಮಾಡಲೇಬೇಕು! ಮಾಡದೆ ಬಿಡಲಾರೆವು! ನಮ್ಮ ಆ ಉದಯ ಭಾನುವಿನ ಮೇಲೆ ಕವಿದ ಮೋಡಗಳನ್ನು ತೊಲಗಿಸಿ ತೀರುತ್ತೇವೆ! ಯುವರಾಜ ಕುಮಾರರು ಎಲ್ಲಿದ್ದಾರೆ? ಅವರ ರಕ್ಷಕರು ಎಲ್ಲಿದ್ದಾರೆ?" ಎಂದು ವಸಂತನು ಉತ್ಸಾಹದ ಉದ್ವೇಗದಲ್ಲಿ ಕೇಳಿದನು.

ಶಾಂತಿದೇವ ಮಹಾರಾಜನು ವಸಂತನೊಂದಿಗೆ ಎಲ್ಲಾ ಸಮಾಚಾರವನ್ನೂ ವಿವರವಾಗಿ ಹೇಳಿ, ಬೆಳಂಜಾಮದ ಹೊತ್ತಿನಲ್ಲಿ ನಿಶ್ಚಿಂತೆಯಿಂದ ಕಣ್ಣು ಮುಚ್ಚಿದನು.

—(ಇನ್ನೂ ಇದೆ)



Scanned by CamScanner




## ೧೩

[ವಸಂತನ ನಾಯಕತ್ವದಲ್ಲಿ ಬಂಡಾಯವೇಳುವ ಯುವಕರನ್ನು ಕಾಪಾಡುವ ಪ್ರಯತ್ನದಲ್ಲಿ ಶಾಂತಿದೇವ ಮಹಾರಾಜನು ಬಲವಾಗಿ ಗಾಯಗೊಂಡನು. ವಸಂತನು ಕ್ರೂರನಾದ ವೀರಸಿಂಹನ ಸೇನಾಧಿಪತಿ ಕಪಾಲ ಕಂಕನನ್ನು ಕೊಂದುಬಿಟ್ಟನು. ಅರಣ್ಯದೊಳಗಿನ ಜಯಾನಂದ ಮುನಿಯ ಆಶ್ರಮದಲ್ಲಿ ಬೆಳೆಯುತ್ತಿರುವ ಯುವ ರಾಜನ ಸಂಗತಿಯನ್ನು ವಸಂತನಿಗೆ ವಿವರಿಸಿ ಹೇಳಿ ಶಾಂತಿದೇವನು ಕೊನೆಯುಸಿರುಬಿಟ್ಟನು. — ಆಮೇಲೆ]

**ಹಾ**ಗೆ ಶಾಂತಿದೇವ ಮಹಾರಾಜನಿಂದ ತಿಳಿದು ಬಂದ ಸಂಗತಿಗಳು, ಅವನ ಮರಣದಿಂದ ವಸಂತನ ಹೃದಯದಲ್ಲಿದ್ದ ಮಹಾ ದುಃಖದ ನಡುವೆ ಬೆಳಗುತ್ತಿದ್ದ ಪ್ರಕಾಶದ ಜ್ಯೋತಿಯಂತೆ, ಸಂತೋಷದ ದೀಪವಾಗಿ ಕಾಣುತ್ತಿತ್ತು. ರಾಜನು ಹೇಳಿದುದಕ್ಕೆ ತಾನು ಮಾತುಕೊಟ್ಟಂತೆ ನಡೆಸುವ ನಿರ್ಧಾರದಲ್ಲಿ, ವಸಂತನು ರಾಜನು ಹೇಳಿದ ವಿವರಗಳ ಗುರುತಿನಂತೆಯೇ ಹೋಗಿ, ಜಯಾನಂದ ಮುನಿಯ ಆಶ್ರಮವನ್ನು ನೋಡಿದನು. ಅಲ್ಲಿ ಬೆಳೆಯುತ್ತಿರುವ ತೇಜಸ್ವಿಯಾದ ಯುವರಾಜನನ್ನೂ ಸಂಧಿಸಿದನು.

ಹಾಗೆ ಸಂತೃಪ್ತನಾದ ವಸಂತನು ಮಹಾರಾಜನ ಭೌತಿಕಕಾಯವನ್ನು ಮಹಾರಾಣಿಯ ಸಮಾಧಿಯ ಪಕ್ಕದಲ್ಲಿಯೇ ಭೂಸ್ಥಾಪನೆ ಮಾಡಿಸಿದನು.

ಇಷ್ಟು ಕಾರ್ಯಗಳಾದ ಸಂದರ್ಭದಲ್ಲಿ ರಾಜಕುಮಾರನಿಗೂ ವಸಂತನಿಗೂ ಗಾಢವಾದ ಮೈತ್ರಿ ಏರ್ಪಟ್ಟಿತು. ಅದನ್ನು ನೋಡಿ ಜಯಾನಂದ ಮುನಿಗೂ ಸಂತೋಷವಾಯಿತು.

ವೀರಸಿಂಹನು ಮಾಡುವ ಹಿಂಸಾಚಾರಗಳನ್ನು ವಸಂತನ ಮೂಲಕ ಕೇಳುತ್ತಿದ್ದಂತೆ ಅಂತಹ ಕ್ರೂರತನಗಳನ್ನು ತಡೆಯುವುದರಲ್ಲಿ ತಾನು ಕೂಡಾ



ಸುಮೇಧ ರಾಜ್ಯದ ಯುವಕರೊಂದಿಗೆ ಕೂಡಿ ಭಾಗವಹಿಸುತ್ತೇನೆಂದು ಸಂದೀಪಕುಮಾರನು ಹೇಳುತ್ತಿದ್ದನು. ಆದರೆ ವಸಂತನು ಹಾಗೆ ಮಾಡಲು ಒಪ್ಪಿಕೊಳ್ಳದೆ ತಡೆಯುತ್ತಿದ್ದನು. "ಕುಮಾರ ಯುವರಾಜಾ, ನಮಗೆಲ್ಲಾ ಆಧಾರವಾಗಿರುವುದೀಗ ನಿಮ್ಮ ಪ್ರಾಣವೊಂದೇ. ಆ ದುರುಳನನ್ನು ಉರುಳಿಸಿ ಮಣ್ಣು ಮುಕ್ಕಿಸಲು ನಾವೇ ಸಾಕು. ನೀವೇ ನಮಗೆಲ್ಲಾ ಅಕ್ಷಯ ಬಲರೂಪರು! ರಹಸ್ಯದಲ್ಲಿ ನಮ್ಮನ್ನು ಹುರಿದುಂಬಿಸುವ ಜೀವಜಲದ ಬುಗ್ಗೆಯಾಗಿರುವಿರಿ!" ಎನ್ನುತ್ತಿದ್ದನು ವಸಂತ.

ಯುವರಾಜ ಸಂದೀಪಕುಮಾರನು ಅರಣ್ಯದೊಳಗೆಲ್ಲಾ ವೀರವಿಹಾರ ಮಾಡುತ್ತಿದ್ದನು. ಅಳಿಲುಗಳ ಹಾಗೆಯೇ ಮರವನ್ನೇರುವನು. ಒಂದು ಮರದಿಂದ ಇನ್ನೊಂದು ಮರಕ್ಕೆ ಹಾರುವನು. ಅವನ ಕಾಲುಗಳು ಕೈಗಳ ಹಾಗೆಯೇ ಕೆಲಸ ಮಾಡುತ್ತಿದ್ದುವು. ಅವನ ಭಾರಕ್ಕೆ ಗೆಲ್ಲು ಮುರಿದರೂ ಕೈಗೋ ಕಾಲಿಗೋ ಮತ್ತೊಂದು ಗೆಲ್ಲು ಸಿಕ್ಕಿದರೂ ಸಾಕಾಗಿತ್ತು. ಕಾಲಿನಲ್ಲಿ ಕೊಂಬೆಗಳ ಮೇಲೆ ಜೋಕಾಲಿಯಾಡುವನು. ಬಿಲ್ಲು ವಿದ್ಯೆಯಲ್ಲಿ ಸ್ವಯಂ ಕಲಿತು ಇಟ್ಟ ಗುರಿ ತಪ್ಪದಂತಾಗಿದ್ದನು. ಅವನ ಶರೀರವು ತಂದೆಯ ಹಾಗೆಯೇ ಉದ್ದ ತೋರ ಸುಂದರವಾಗಿ ಮಹಾರಾಜನಿಗೆ ತಕ್ಕ ಹಾಗೆ ಭವ್ಯವಾಗಿ ಗಂಭೀರವಾಗಿ ಕಾಣುತ್ತಿತ್ತು. ಹಾಗೆಯೇ ಬೆಳೆಯುತ್ತ ದೊಡ್ಡವನಾದನು.

ದಿನಗಳು ಕಳೆಯುತ್ತಿದ್ದ ಹಾಗೆ ಸುಮೇಧ ರಾಜ್ಯದಲ್ಲಿ ಶಾಂತಿಭದ್ರತೆಗಳಿಗೆ ಬರ ಹೆಚ್ಚುತ್ತಾ ಹೋಗುತ್ತಿತ್ತು. ಸಾಮಾನ್ಯ ಜನರ ಜೀವನವು ಕಂಟಕಪ್ರಾಯವಾಗಿತ್ತು. ವ್ಯಾಪಾರಿಗಳಿಗೂ ರಕ್ಷಣೆ ಇರಲಿಲ್ಲ. ರೈತರಿಗೂ ಅಷ್ಟೇ. ಮತ್ತೊಂದು ಕಡೆಯಲ್ಲಿ ಎಷ್ಟು ಪ್ರಯತ್ನಿಸಿದರೂ, ವೀರಸಿಂಹನು ತನ್ನ ಪಥಕಗಳಿಗೆ ಅಡ್ಡ ಬರುವವರನ್ನು ಅಡಗಿಸಿ ಬಿಡುತ್ತಿದ್ದನು. ಎಷ್ಟೋ ಯುವಕರ ಕೈಕಾಲುಗಳಿಗೆ ಊನ ಬಂತು.

ಕಡೆಗೆ ಒಂದು ದಿನ ವೀರಸಿಂಹನು ತನ್ನ ಸೇನಾಧಿಪತಿ ಸರ್ಪದಂತನನ್ನು ಕರೆದು, "ಹೀಗೆ ಬಿಡದೆ ನಮ್ಮ ಮೇಲೆ ತಿರುಗಿಬಿದ್ದು ದಂಗೆ ಏಳುವವರನ್ನು ಸಹಿಸಿ ಅಯ್ಯೋ ಪಾಪವೆಂದು ಪ್ರಯೋಜನವಿಲ್ಲ. ಈ ದಿನ ಪೂರ್ತಿ ಅವರ ಅಂತ್ಯ ನೋಡಲೇಬೇಕು. ಅವರ ರಹಸ್ಯ ಸ್ಥಾನಗಳು ಅರಣ್ಯದೊಳಗೆ ತಾನೇ ಇವೆ? ಅರಣ್ಯಗಳನ್ನೆಲ್ಲಾ ಪೂರ್ತಿ ಗಾಳಿಸಿ ಬಿಡಬೇಕು. ಮೃಗಗಳ ಹಾಗೆಯೇ ಆ ಮನುಷ್ಯರ ಬೇಟೆಯಾಡಿ ಬಿಡಬೇಕು. ಹೊರಡು" ಎಂದನು.

"ಅಪ್ಪಣೆ ಮಹಾಪ್ರಭೂ ಸೇನೆಗಳನ್ನು ಅರಣ್ಯಗಳ ಕಡೆಗೇ ಹೊರಡಿಸುತ್ತೇನೆ" ಎಂದನು ಸರ್ಪದಂತ.

"ಎಲ್ಲಾ ಸೇನೆಗಳಿಗೂ ನಾನೇ ಸ್ವಯಂ ಅಧಿಪತಿಯಾಗಿ ನಡೆಸುತ್ತೇನೆ" ಎಂದನು ವೀರಸಿಂಹ.

ಆ ಮಾತು ಕೇಳಿ ಸರ್ಪದಂತನು ಆಶ್ಚರ್ಯಪಟ್ಟು, ಸಮಾಳಿಸಿಕೊಂಡು, "ಮಹಾಪ್ರಭುಗಳು ಕ್ಷಮಿಸ

ಬೇಕು. ಬೇರೆ ಯಾವ ರಾಜ್ಯದ ಮೇಲೆ ದಂಡೆತ್ತುವುದಾದರೆ ಪರ್ವಾಗಿದ್ದಿಲ್ಲ. ಆದರೆ ಕೇವಲ ಸಿಕ್ಕುಸಿಕ್ಕಾದ ಅರಣ್ಯದೊಳಗೆ, ಅಡಿಗಡಿಗೂ ನಾಲ್ಕು ಸುತ್ತಲೂ ಮೃಗಗಳ ಮತ್ತು ನರ ಮೃಗಗಳಂತಹ ಘೋರರ ಕಾಟವಿರುವ ಅರಣ್ಯದೊಳಗೆ ಪ್ರಭುಗಳು ಸ್ವತಹಾ ಹೋಗಬೇಕೇ ? ಸ್ವಲ್ಪ ಆಲೋಚನೆ ಮಾಡಿರಿ ಪ್ರಭೂ " ಎಂದನು ವಿನಯದಿಂದ.

ಅವನ ಮಾತು ಕೇಳಿ ವೀರಸಿಂಹನು ಬಹಳ ಸಂತೋಷದಿಂದ ಉಕ್ಕಿ, " ನೀನು ಹೇಳಿದ್ದು ನಿಜವೇ. ಆದರೆ ನಾನು ಬಹಿರಂಗವಾಗಿ ಯುದ್ಧಕ್ಕೆ ಹೊರಡುವುದಲ್ಲ. ನಾನು ಕೆಲವು ಸೈನಿಕರೊಂದಿಗೆ ಕಾಡಿಗೆ ಬೇಟೆಯಾಡಲು ಹೋಗುವ ಹಾಗೆ ಹೋಗುತ್ತೇನೆ. ನಮಗಿಂತ ಮೊದಲು ನಮ್ಮ ಸೈನಿಕರು ಅಡವಿಗೆ ಹೋಗಿ ಅರಣ್ಯದೊಳಗಿನ ಒಂದು ಪ್ರಾಂತ್ಯವನ್ನು ಅರ್ಧಚಂದ್ರಾಕಾರದಲ್ಲಿ ಸುತ್ತು ಮುತ್ತಿ ಅಲ್ಲಿಯ ಮೃಗಗಳನ್ನು ಅಟ್ಟಿಸುತ್ತಾರೆ. ಹಾಗೆ ಅಟ್ಟುತ್ತಾ ನಾವಿರುವ ಕಡೆಗೆ ಬರುತ್ತಾರೆ. ಹೀಗೆ ಮಾಡುವುದರಿಂದ ಅರಣ್ಯದ ಮೃಗಗಳೊಡಿಗೆ, ಆ ದುಷ್ಟಪುಂಡರು ಕೂಡಾ ತಪ್ಪಿಸಿಕೊಳ್ಳಲು ಸಾಧ್ಯವಾಗದು ಹೌದಾ ? ಹೀಗೆ ಅಡವಿ ಪೂರಾ ಗಾಳಿಸಿ ಹಾಕಿಬಿಟ್ಟರೆ, ಕೆಲವೇ ದಿನಗಳಲ್ಲಿ ಬಂಡಾಯಗಾರರನ್ನೆಲ್ಲಾ ಆರಿಸಿ ಹೆಕ್ಕಿ ಬಿಸುಡಬಹುದು. ಏನನ್ನುವಿ ? " ಎಂದು ಪ್ರಶ್ನಿಸಿದನು.

" ಆಹಾ ! ಅತ್ಯುತ್ತಮವಾದ ಆಲೋಚನೆಯಿದು! ಮಹಾಪ್ರಭುಗಳ ಬುದ್ಧಿ ಬಲಕ್ಕೆ ಎಣೆಯೇ ಇಲ್ಲ !" ಎಂದನು ಸರ್ಪದಂತ.

" ಸರಿ ನಮ್ಮ ಆಲೋಚನೆಯನ್ನು ಕಾರ್ಯರೂಪಕ್ಕೆ ತರಲು ಈ ಕ್ಷಣವೇ ಹೊರಡು " ಎಂದು ಆಜ್ಞಾಪಿಸಿದನು ವೀರಸಿಂಹ.

ಬೇಟೆಗೆ ಹೊರಡುವ ಸನ್ನಾಹವು ಬಹು ವೇಗವಾಗಿ ನಡೆಯಿತು. ಬೆಳಗಾಗುವಷ್ಟರಲ್ಲಿ ಎಲ್ಲಾ ಸಿದ್ಧ.



ಮರುದಿನ ವೀರಸಿಂಹನು ನೂರಾರು ಸೈನಿಕರನ್ನು ಕರೆದುಕೊಂಡು, ಸರ್ಪದಂತನೊಂದಿಗೆ ಕೂಡಿ ಅರಣ್ಯದ ಕಡೆಗೆ ಹೊರಟನು. ಸುಮೇಧ ರಾಜ್ಯದ ಸರಿಹದ್ದಿನಲ್ಲಿರುವ ಅರಣ್ಯವು ವಿಶಾಲವಾದುದಾದರೂ, ದುರದೃಷ್ಟವಶಾತ್ ವೀರಸಿಂಹ ಬಂದ ಪ್ರಾಂತ್ಯದಲ್ಲಿಯೇ ಜಯಾನಂದ ಮುನಿಯ ಆಶ್ರಮವಿದ್ದಿತು!

ವೀರಸಿಂಹನು ಅರಣ್ಯ ಪ್ರಾಂತ್ಯವನ್ನೆಲ್ಲಾ ಒಂದು ಸಾರಿ ಸುತ್ತಲೂ ದೃಷ್ಟಿ ಹಾಯಿಸಿ, " ಈ ದಿನ ನಾನು ಹುಲಿ, ಚಿರತೆ, ತೋಳ, ಕರಡಿಗಳಂತಹ ದೊಡ್ಡ ದೊಡ್ಡ ಅಡವಿ ಮೃಗಗಳನ್ನು ಕೊಲ್ಲಬೇಕು. ನೀವೆಲ್ಲರೂ, ಆ ಕಡೆಯಿಂದ ಮುಂದು ಹೋಗಿ ತಮಟೆ, ಢಕ್ಕೆ ಕೊಂಬು, ತುತ್ತೂರಿಗಳನ್ನು ಮೊಳಗಿಸಿಕೊಂಡು ಆ ಪ್ರಾಣಿಗಳನ್ನು ನಮ್ಮ ಮುಂದೆ ಅಟ್ಟಿಸಿಕೊಂಡು ಬನ್ನಿ " ಎಂದು ಆಜ್ಞೆ ಮಾಡಿದನು.

ಸೈನಿಕರೆಲ್ಲಾ ಉತ್ಸಾಹದಿಂದ ಹೋಗಿ ವಿಧವಿಧವಾದ ಕಿವಿಗಡಚಿಕ್ಕುವ ಶಬ್ದಗಳನ್ನೆಬ್ಬಿಸಿಕೊಂಡು



Scanned by CamScanner



ಅಡವಿಯೊಳಗೆ ಈ ಕಡೆಗೆ ಬರತೊಡಗಿದರು. ವೀರಸಿಂಹನು ಸೈನಿಕರೊಂದಿಗೆ ಕಾದಿದ್ದನು.

ಜಯಾನಂದ ಮುನಿಯ ಶಿಷ್ಯರು ಈ ಗಂಡಾಂತರ ವನ್ನರಿತು ಅಡವಿಯೊಳಗೆ ಹೋಗಿ ವೀರಸಿಂಹನ ದಾಳಿಯ ಸಂಗತಿಯನ್ನು ಗುರುವಿನೊಂದಿಗೆ ಹೇಳಿದರು. ಕೂಡಲೇ ಜಯಾನಂದ ಮುನಿ, ಯುವ ರಾಜನನ್ನು ಅವರ ಕಣ್ಣಿಗೆ ಬೀಳದಂತೆ ಅಡಗಿ ಕೊಳ್ಳಲು ಹೇಳಿದನು. ಗಿಳಿಯನ್ನು ಕರೆದು "ಮಲ್ಲೀ, ನೀನು ಹೋಗಿ ಹುಲಿ, ಭಲ್ಲೂಕಿ, ಆನೆ ಮೊದಲಾದವು ಗಳನ್ನು ಹುಷಾರಾಗಿರುವಂತೆ ಎಚ್ಚರಿಸು" ಎಂದನು.

ಗಿಳಿ ಮುನಿಯ ಅಪ್ಪಣೆಯನ್ನು ಶಿರಸಾವಹಿಸಿ ಕೊಂಡು ಹಾರಿಹೋಯಿತು.

ಆದರೆ ಅಷ್ಟರೊಳಗೆ ಭಲ್ಲೂಕಿಗೆ ಅಪಾಯ ಬಂದುಬಿಟ್ಟಿತು. ಇದ್ದಕ್ಕಿದ್ದ ಹಾಗೆ ಕಿವಿಗೆ ಬಿದ್ದ ಕರ್ಣ ಕಠೋರವಾದ ಧ್ವನಿಗಳಿಂದ ಗಾಬರಿಬಿದ್ದ ಭಲ್ಲೂಕಿ, ತನ್ನ ಮಗನಂತೆ ಸಾಕಿದ ಯುವರಾಜನನ್ನು ಹುಡುಕ ತೊಡಗಿತು. ಯುವರಾಜನ ಭದ್ರತೆಯನ್ನೇ ನೆನೆದು ಅತ್ತ ಇತ್ತ ಓಡಾಡುತ್ತಿತ್ತು. ತನ್ನನ್ನೇ ಮರೆತು ಹೋಯಿತು ಆ ಭಲ್ಲೂಕಿ!

ಭಲ್ಲೂಕಿಯನ್ನು ನೋಡಿದ ಕೂಡಲೇ, "ಕರಡಿ! ಬಂಧಿಸಿ ಆ ಕರಡಿಯನ್ನು!" ಎಂದು ವೀರಸಿಂಹನು ಅರಚಿ ಕೂಗಿದನು.

ಪಕ್ಕದಲ್ಲಿದ್ದ ಬೇಟೆಗಾರರು ಭಲ್ಲೂಕಿಯ ಮೇಲೆ ಬಲೆ ಬೀಸಿದರು. ಭಲ್ಲೂಕೀ ಬಲೆಯಲ್ಲಿ ಸಿಕ್ಕಿಬಿದ್ದ ಕೂಡಲೇ ಕೆಲವು ಸೈನಿಕರು ಅದರ ಸುತ್ತಲೂ ಮುತ್ತಿಕೊಂಡರು. ಬಲೆಯಿಂದ ತಪ್ಪಿಸಿಕೊಳ್ಳಲು ಭಲ್ಲೂಕೀ ಹಲ್ಲು ಉಗುರು ಕಾಲುಗಳಿಂದ ಶರೀರ ದಿಂದ ಬಹಳ ಪ್ರಯತ್ನಮಾಡಿಕೊಂಡಿತ್ತು. ಆದರೆ ಅದರ ಪ್ರಯತ್ನವಾವುದೂ ಪ್ರಯೋಜನವಾಗಲಿಲ್ಲ. ಭಟರು ಕತ್ತಿ ಝಳಪಿಸುತ್ತ, ಕೊರಡೆ ಬೀಸುತ್ತ ಅದನ್ನು ಹೆದರಿಸಿಕೊಂಡಿದ್ದರು.

ಆ ದೃಶ್ಯದಿಂದ ವೀರಸಿಂಹನು ಗಟ್ಟಿಯಾಗಿ ನಗುತ್ತ, "ಶಹಭಾಸ್! ಒಳ್ಳೆಯ ಬಹುಮಾನವೇ ಸಿಕ್ಕಿತು. ಇದಕ್ಕಿಂತ ಕ್ರೂರವಾದ ಮೃಗಗಳನ್ನೂ ಹೀಗೆಯೇ ಹಿಡಿಯಬೇಕು" ಎಂದು ಪಕ್ಕದಲ್ಲಿದ್ದ ಸರ್ಪದಂತನ ಕಡೆಗೆ ತಿರುಗಿ, ಸಣ್ಣ ಸ್ವರದಲ್ಲಿ "ದುಷ್ಟರಾದ ಆ ಬಂಡುಗಾರರನ್ನು ಕೂಡಾ ಹೀಗೆಯೇ ಹಿಡಿಯ ಬೇಕು ತಿಳೀತಾ?" ಎಂದನು.

"ಹೌದು ಪ್ರಭೂ ಹೌದು. ಜೀವದರೊಂದಿಗೆ ಹಿಡಿಯಲು ಇದೇ ಸರಿ! ಕೊಂದುಬಿಟ್ಟರೆ ಏನಿದೆ?" ಎಂದು ಮುಂದಕ್ಕೆ ನಡೆದನು ಸರ್ಪದಂತ.

ಆದರೆ ಸರ್ಪದಂತನು ಒಂದಡಿ ಇಟ್ಟು ಮತ್ತೊಂದಡಿ ಎತ್ತುವಾಗ "ನಿಲ್ಲಿರಿ!" ಎಂಬ ಕಂಠಸ್ವರವು ಕೇಳಿಸಿತು.

ಎಲ್ಲರೂ ತಿರುಗಿ ನೋಡಿದರು.

ಒಂದು ದೊಡ್ಡ ಪೊದರಿನ ಮರೆಯಿಂದ ಮುಂದೆ ಬರುತ್ತಿದ್ದ ಜಯಾನಂದ ಮುನಿ ಅವರ ಸಮೀಪ



Scanned by CamScanner



"ಒಳ್ಳೆಯ ರಾಜನು ಒಳ್ಳೆಯ ಸಾಂಪ್ರದಾಯವನ್ನು ಭಂಗಪಡಿಸಲಾರನು. ಗೇಲಿ ಮಾಡಲಾರನು" ಎಂದನು ಜಯಾನಂದ ಮುನಿ.

"ಇಷ್ಟೆಲ್ಲಾ ಹೇಳುವ ನೀನು ಯಾರು? ಹೆಸರೇನು? ನಾನು ಒಳ್ಳೆಯ ರಾಜನಲ್ಲವೆನ್ನುವಿಯಾ?" ಎಂದು ವೀರಸಿಂಹನು ಕಣ್ಣುಗಳನ್ನುರುಳಿಸಿ ಮುನಿಯನ್ನು ನೋಡಿದನು.

"ನೀನು ಒಳ್ಳೆಯ ರಾಜನು ಹೌದೋ ಅಲ್ಲವೋ ಎಂಬುದನ್ನು ನಿನ್ನ ಕೃತಿಗಳಿಂದ ನೀನೇ ನಿರೂಪಿಸಬೇಕಪ್ಪಾ" ಎಂದನು ಮುನಿ.

"ನಿರೂಪಿಸಬೇಕೇ? ಯಾರ ಸಮಕ್ಷಮದಲ್ಲಿ? ನಿನ್ನ ಮುಂದೆಯೇ ನಿರೂಪಿಸಬೇಕೆ? ನೀನೋ ನಮಗೆ ನ್ಯಾಯಾಧಿಪತಿ? ಅಬ್ಬಾ! ಎಷ್ಟರಮಟ್ಟಿಗೆ ನಿನ್ನಂಥವರನ್ನು ಬೆಳೆಸಿಬಿಟ್ಟಿದ್ದಾರೆ! ಎಂಥಾ ಗರ್ವದ ಮಾತು!" ಎಂದು ಹೂಂಕರಿಸಿದನು ವೀರಸಿಂಹ.

ಅಷ್ಟರಲ್ಲಿ ಬಲೆಯಲ್ಲಿ ಬಂಧಿಸಲ್ಪಟ್ಟ ಭಲ್ಲೂಕ ಬಹು ಕಷ್ಟದಿಂದ ಮುಂಗಾಲುಗಳನ್ನು ಕೈಗಳ ಹಾಗೆ ಹೊರಕ್ಕೆ ಎಳೆದುಕೊಂಡೆತ್ತಿ ಹತ್ತಿರದಲ್ಲಿದ್ದ ಒಬ್ಬ ಸೈನಿಕನ ಮುಖಕ್ಕೆ ಹೊಡೆದು ಗಾಯಮಾಡಿತು. ಭಟನು ಕೆಟ್ಟ ಧ್ವನಿಯಿಂದ ಕೂಗಿಕೊಂಡನು.

ಅವನ ಕೂಗು ಕೇಳಿ ಆ ಕಡೆಗೆ ತಿರುಗಿ ನೋಡಿದ ವೀರಸಿಂಹನು "ಈ ದುಷ್ಟ ಮೃಗವನ್ನು ಕೊಲ್ಲಿರಿ" ಎಂದು ಕೂಗಿದನು.

"ಅದು ದುಷ್ಟ ಮೃಗವಲ್ಲ ವೀರಸಿಂಹಾ! ನೀವೆಲ್ಲಾ ಅದನ್ನು ಹಿಂಸಿಸುತ್ತಿದ್ದೀರಿ. ಅದು ತನ್ನನ್ನು ಕಾಪಾಡಿಕೊಳ್ಳಲು ಇದಿರಿಸುತ್ತದೆ, ಅಷ್ಟೇ" ಎಂದನು ಜಯಾನಂದಮುನಿ.

"ಎಂಥಾ ಗರ್ವದ ಮುನಿ ಇವನು! ರಾಜ್ಯಾಧಿಪತಿಯಾದ ವನ್ನನ್ನು ಹೆಸರು ಹಿಡಿದು ಕರೆಯಬೇಕಾದರೆ ಏನಿವನ ತಲೆಪೊಗರು! ನಾನೇನೋ ಇವನ ಸ್ವಂತ ಆಸ್ತಿಯೊಳಗೆ ನುಸುಳಿದ ಹಾಗೆ,

ಬಂದು, "ದಯಮಾಡಿ, ಒಂದೆರಡು ಕ್ಷಣ ನಾನು ಹೇಳುವುದನ್ನು ಕೇಳಿರಿ. ಸುಮೇಧ ರಾಜ್ಯಾಧಿಪತಿಗಳು ಈವರೆಗೂ ಈ ಪ್ರಾಂತ್ಯಕ್ಕೆ ಹೀಗೆ ಬಂದುದಿಲ್ಲ. ಅವರ ಕುಲಗುರುಗಳೆಲ್ಲಾ ಇಲ್ಲಿಯೇ ಕೊನೆತನಕ ಪ್ರಶಾಂತ ಜೀವನ ನಡೆಸಿದುದರಿಂದ ಇದನ್ನೊಂದು ಪವಿತ್ರ ಅರಣ್ಯ ಭಾಗವೆಂದು ಭಾವಿಸುತ್ತಾರೆ. ಆ ಸಾಂಪ್ರದಾಯವನ್ನು ಪಾಲಿಸಿ ನೀವು ಕೂಡಾ ಈ ಪ್ರಾಂತ್ಯದಿಂದ ಹಿಂದಿರುಗಿ ಹೋಗುವುದು ಒಳ್ಳೆಯದು" ಎಂದನು.

ಅದನ್ನು ಕೇಳಿ ವೀರಸಿಂಹನು ಅವಹೇಳನೆಯಾಗಿ ನಕ್ಕು, "ಆಹಾಹಾ!...ಹಿಂದೆ ಇದ್ದ ಒಬ್ಬ ರಾಜನು ಒಂದು ಗೊಡ್ಡು ಸಾಂಪ್ರದಾಯ ಸೃಷ್ಟಿಸಿಬಿಟ್ಟನೆಂದರೆ, ಮತ್ತೊಬ್ಬ ರಾಜನು ಅದನ್ನು ತನಗೆ ಇಷ್ಟ ಬಂದ ಪ್ರಕಾರ ನಿರ್ಮೂಲಿಸಬಹುದು. ಇದೆಲ್ಲಾ ಇಲ್ಲಿರುವ ವನವಾಸಿಗಳಿಗೇನು ಗೊತ್ತು?" ಎಂದು ಮತ್ತೆ ಗಹಗಹಿಸಿ ನಕ್ಕನು.



Scanned by CamScanner

ಬುದ್ಧಿ ಹೇಳಲಿಕ್ಕೆ ನೋಡುತ್ತಾನೆ! ಆಜ್ಞೆಯ ಹಾಗೆ ಹೇಳುತ್ತಾನೆ!" ಎಂದು ಮುನಿಯನ್ನು ದುರುದುರು ನೋಡಿದನು.

"ಅಪ್ಪಾ, ವೀರಸಿಂಹಾ! ಇದು ನಿನ್ನದೋ ನನ್ನದೋ ಜಾಗವಲ್ಲ. ಪ್ರಕೃತಿಯ ಸರಿಹದ್ದಿನ ಜಾಗ" ಎಂದನು ಜಯಾನಂದ ಮುನಿ.

ಅಷ್ಟು ಕೇಳಿದ ಕೂಡಲೇ ವೀರಸಿಂಹನು ಹಲ್ಲು ಕಡಿಯುತ್ತ "ಈ ತಲೆತಿರುಕ ಮುದುಕನನ್ನು ಹಿಡಿದು ಬಂಧಿಸಿರಿ!" ಎಂದು ಕೂಗಿದನು.

ಕೂಡಲೇ ಕೆಲವು ಸೈನಿಕರು ಹೆದರದೆ ನಿಂತ ಜಯಾನಂದ ಮುನಿಯನ್ನು ಹಿಡಿದದ್ದೇ ತಡ, ಇಡೀ ಅರಣ್ಯವೇ ರೋದಿಸುವಂತೆ ಮೃಗ ಪಕ್ಷಿ ಹಾವು ಹರಣೆಗಳೆಲ್ಲಾ ವಿಧವಿಧವಾಗಿ ಕೂಗಿಕೊಂಡುವು.

ಅದೇನೆಂದು ಎಲ್ಲರೂ ಸ್ತಂಭಿಸಿಕೊಂಡಿರುವಾಗಲೇ ಪೊದರುಗಳೆಡೆಯಿಂದ ಒಂದು ಬಾಣವು ರೊಯ್ಯನೆ ಬಂದು ವೀರಸಿಂಹನ ಪಾದದ ಹತ್ತಿರ ನೆಲದಲ್ಲಿ ಚುಚ್ಚಿಕೊಂಡಿತು. ಆ ಬಾಣದಲ್ಲಿ ಒಂದು ಪತ್ರ ಸುತ್ತಿಕೊಂಡಿತ್ತು. "ವೀರಸಿಂಹಾ! ಈ ಬಾಣದಿಂದ ಈ ಪತ್ರಕ್ಕೆ ಬದಲು ನಿನ್ನ ಪ್ರಾಣ ತೆಗೆಯ ಬಹುದಿತ್ತು! ಹಾಗೆ ಕಳ್ಳತನದಿಂದ ಪ್ರಾಣ ತೆಗೆಯುವುದು ನಮ್ಮ ಅಭಿಮತವಲ್ಲ. ಗೌರವದಿಂದ ಕರಡಿಯನ್ನು ಬಿಟ್ಟುಕೊಟ್ಟು ಬಂದ ದಾರಿ ಹಿಡಿ."

ಈ ಪತ್ರ ವಾಚನದಿಂದ ವೀರಸಿಂಹನು ಆಗ್ರಹಾವೇಶದಿಂದ ಓಲಾಡಿದನು. "ಏ! ಈ ಬಾಣ ಹೊಡೆದವನನ್ನು ಹಿಡೀರೋ! ಇಲ್ಲೇ ಸಮೀಪದಲ್ಲಿದ್ದಾನೆ!" ಎಂದು ಕೀಚು ಧ್ವನಿಯಿಂದ ಕಂಠ ಹರಿಯುವಂತೆ ಕೂಗಿದನು.

ಸೈನಿಕರು ನಾಲ್ಕು ದಿಕ್ಕುಗಳಿಗೂ ಓಡಿದರು. ಆದರೂ ಆ ಪತ್ರದ ವಿಷಯ ಮೇಲೆದ್ದೆದ್ದು ಅವನನ್ನು ಹೆದರಿಸಿ ನಡುಗಿಸುತ್ತಲೇ ಇತ್ತು. ನಿಜಕ್ಕೂ ಆ ಬಾಣವು ತನ್ನ ಶರೀರದೊಳಗೆ ಪ್ರವೇಶಿಸಿದ್ದರೆ




ಏನಾಗುತ್ತಿತ್ತು! ಈ ಯೋಚನೆ ಬಂದ ಕೂಡಲೇ ವೀರಸಿಂಹನು ಭಯಕಂಪಿತನಾಗಿ, ಅಂಗರಕ್ಷಕರೊಡನೆ, "ಇಲ್ಲಿಗೆ ಬಂದದ್ದಕ್ಕೆ ಈ ಕರಡಿಯನ್ನೂ ಇದರ ತಾತನ ಹಾಗಿರುವ ಆ ಮುದುಕನನ್ನೂ ಹಿಡಿದು ರಾಜಧಾನಿಗೆ ಒಯ್ಯೋಣ. ಬಾಣಬಿಟ್ಟ ಆ ದುಷ್ಟನನ್ನು ಸೈನಿಕರು ಹಿಡಿದು ತರುತ್ತಾರೆ" ಎಂದನು.

ಆದರೆ ಕೆಲವೇ ಕ್ಷಣಗಳಲ್ಲಿ ಸುತ್ತುಮುತ್ತಲಿನ ಸೈನಿಕರು ಹೆದರಿ ಸಾಯುವಂತಹ ಹಾಹಾಕಾರ ಮಾಡುವುದು ಕೇಳಿಸಿತು. ಸೈನಿಕರೆಲ್ಲಾ ಆರ್ತನಾದಗಳನ್ನು ಮಾಡುತ್ತಾ ಕಲ್ಲುಮುಳ್ಳು ಪೊದೆ ಪೊಟರೆಗಳ ಅರಿವಿಲ್ಲದೆ ಓಡಿದರು. ಕೆಲವರು ಮರದ ಮೇಲೇರಿದರು.

"ನಾವೀಗ ಓಡಿಹೋಗಬೇಕು. ಮಹಾರಾಜರೇ! ಅರಣ್ಯ ಮೃಗಪಕ್ಷಿಗಳೆಲ್ಲವೂ ಒಂದಾಗಿ ಕೂಡಿಕೊಂಡ ಹಾಗೆ ತಿರುಗಿ ನಮ್ಮ ಮೇಲೆ ದಾಳಿಮಾಡಲು ಬರುತ್ತಿವೆ!" ಎಂದು ದೂರದಲ್ಲಿ ಮರದಲ್ಲಿದ್ದ

ಸೈನಿಕನು ಕೂಗಿ ಹೇಳಿದನು. ಅವನ ಹಾಗೆಯೇ ಮತ್ತೊಬ್ಬ ಓಡಿಹೋಗುವವನೂ ಕೂಗಿದನು.

ಹುಲಿಗಳ ಗಾಂಢ್ರಿಕೆಗಳಿಂದ, ಆನೆಗಳ ಘೀಂಕಾರ ಗಳಿಂದ, ಕೋತಿಗಳ ಕೀಚು ಕೀಚುಗಳಿಂದ, ನರಿಗಳ ಊಳ್ವನಿಗಳಿಂದ, ಗೂಗೆಗಳ ಘೂಂಕಾರಗಳಿಂದ, ಒಮ್ಮೆಗೇ ಆ ಪ್ರದೇಶವೆಲ್ಲಾ ಭಯಂಕರ ಬೀಭತ್ಸ ಮಯವಾಯಿತು. ಒಂದು ಕೋತಿ ವೀರಸಿಂಹನ ಕಿರೀಟವನ್ನು ಎತ್ತಿಕೊಂಡು ಹೋಯಿತು! ಒಂದು ಕಾಗೆ ಸರ್ಪದಂತನ ಮುಂಡಾಸನ್ನು ಎತ್ತಿಕೊಂಡು ಹಾರಿಹೋಯಿತು. ಕೆಲವರ ಮೇಲೆ ಹೆಬ್ಬಾವು ಗಳೂ, ಹಾವುಗಳೂ ಬಿದ್ದುವು.

ಅರಣ್ಯವೇ ಎಬ್ಬಿಸಿದ ಧ್ವನಿಗಳಿಗೆ ಹೆದರಿ ಮರ ಗಳಿಗೆ ಕಟ್ಟಲ್ಪಟ್ಟ ಸೈನಿಕರ ಕುದುರೆಗಳು ಕುಣಿದು ಕುಪ್ಪಳಿಸಿ ಹೇಷಾರವ ಮಾಡುತ್ತ ಕಟ್ಟು ಕಡಿದು ಕೊಂಡು ಎತ್ತೆತ್ತೋ ಓಡಿಹೋದುವು.

ಇಷ್ಟೆಲ್ಲವನ್ನೂ ನೋಡಿ ವೀರಸಿಂಹನೂ, ಸರ್ಪ ದಂತನೂ ಮತ್ತೇನು ಮಾಡಲಿಕ್ಕೂ ತೋರದೆ, ಭಲ್ಲೂಕಿಯನ್ನೂ, ಜಯಾನಂದ ಮುನಿಯನ್ನೂ ಅಲ್ಲಿಯೇ ಬಿಟ್ಟು ತಮ್ಮ ತಮ್ಮ ಜೀವವನ್ನು ಮುಷ್ಟಿಯೊಳಗಿಟ್ಟುಕೊಂಡು ಓಟ ಕಿತ್ತರು.

ಅರಣ್ಯ ಮೃಗ ಪಕ್ಷಿಗಳಿಂದ ಗಾಯಪಟ್ಟು, ಕಲ್ಲು ಮುಳ್ಳುಗಳ ಮೇಲೆ ಬಿದ್ದು ಇನ್ನಿಷ್ಟು ರಕ್ತ ಒಸರಿಸಿಕೊಂಡು ಹೃದಯವಿದಾರಕವಾದ ಹಾಹಾಕಾರ ಗಳೊಂದಿಗೆ ಮೇಲೆ ಕೆಳಗೆ ಬೀಳುತ್ತಾ ಓಡಿಯೇ ಓಡಿದರು ಸೈನಿಕರೆಲ್ಲರೂ.

ಸ್ವಲ್ಪ ಹೊತ್ತಿಗೆ ವೀರಸಿಂಹನೂ ಅವನ ಭಟರೂ ಹೇಗೋ ಅರಣ್ಯ ಪ್ರಾಂತ್ಯದಿಂದ ಹೊರಬಿದ್ದು, ಸಮೀಪದಲ್ಲಿದ್ದ ದೊಡ್ಡದೊಂದು ಮೈದಾನ ಪ್ರದೇಶ ವನ್ನು ಸೇರಿದರು. ಅಲ್ಲಿಗೂ ಬಿಡದೆ ಅಡವಿಯ ಮೃಗಗಳು ಅವರನ್ನು ಓಡಿಸಿಕೊಂಡೇ ಇದ್ದುವು. ದೊಡ್ಡ ಹುಲಿಯೊಂದು ವೀರಸಿಂಹನನ್ನೇ ಗುರಿ ಹಿಡಿದು ಬಂದಹಾಗೆ ಅವನ ಮೇಲೆ ಹಾರಿತು. ಅವನು ಧಡಾಲನೆ ಮಗುಚಿಬಿದ್ದು ಮಹಾ ಭೀತಿ ಯಿಂದ ಮೂರ್ಛೆಹೋದನು.

"ಓ ಪ್ರಿಯ ಮಿತ್ರರೇ! ಇನ್ನು ಸಾಕು. ತಿರುಗಿ ಬನ್ನಿ" ಎಂದು ಮಧುರವೂ ಗಂಭೀರವೂ ಶಾಂತವೂ ಆದ ಕಂಠಸ್ವರವು ಕೇಳಬಂದಿತು. ಓಡಿಸಿಕೊಂಡು ಬಂದ ಎಲ್ಲಾ ಪ್ರಾಣಿಗಳೂ ಮಂತ್ರದಿಂದ ಹಿಂದಿರುಗಿ ದಂತೆ, ಅಲ್ಲಿಂದ ಹಿಂದೆ ಸೀದಾ ಅರಣ್ಯದ ಕಡೆಗೆ ಹೋದುವು. ಅದು ಜಯಾನಂದ ಮುನಿಯ ಕಂಠಸ್ವರವಾಗಿರಲಿಲ್ಲ. ಅಡವಿಗೂ ಮೈದಾನಕ್ಕೂ ನಡುವೆ ಇದ್ದ ಗುಡ್ಡದ ಶಿಖರದ ನಡುವೆ ನಿಂತಿದ್ದ ಸುಂದರ ಯುವಕನ ಕಂಠದಿಂದ ಹೊರಟ ಆಜ್ಞೆ ಯಾಗಿತ್ತು ಅದು.

—(ಇನ್ನೂ ಇದೆ)






## ೧೪

[ಅರಣ್ಯದ ಮಧ್ಯದಲ್ಲಿ ರಹಸ್ಯ ನಿವಾಸಗಳನ್ನು ಏರ್ಪಡಿಸಿಕೊಂಡ ಬಂಡಾಯಗಾರರನ್ನು ಅರಿಸಿ ಹಿಡಿದು ಬಿಸುಡಬೇಕೆಂದು ವೀರಸಿಂಹನು ಬೇಟೆಯ ನೆಪದಲ್ಲಿ ಅರಣ್ಯಕ್ಕೆ ಹೋದನು. ಮರುಕ್ಷಣದಲ್ಲೇ ಅರಣ್ಯದ ಮೃಗ ಪಕ್ಷಿಗಳೆಲ್ಲಾ ಓಡಿಸಿಕೊಂಡು ಬರುವುದನ್ನು ನೋಡಿ ಸತ್ತುಳಿದ ಸೈನಿಕರೊಂದಿಗೆ ತಾನೂ ಓಡಿ ರಾಜಧಾನಿಯನ್ನು ಸೇರಿಕೊಂಡ ವೀರಸಿಂಹನಿಗೆ ಬದುಕಿ ಬಂದದ್ದೇ ಹೆಚ್ಚೆನಿಸುವಂತಾಯಿತು. —ಅನಂತರ]

**ಸಾ**ಯದೆ ಬದುಕಿ ಉಳಿದದ್ದೇ ದೊಡ್ಡದೆಂಬಂತಹ ಘೋರ ಪರಾಭವದಿಂದ ವೀರಸಿಂಹನು ತಲೆಯೆತ್ತಲಾಗದಂತಾಗಿ, ರಾಜಸಭೆಗೆ ಬರುವುದನ್ನೇ ಬಿಟ್ಟು ಅರಮನೆಯೊಳಗೇ ಅಡಗಿದ್ದನು. ಊಹಿಸಲಾಗದಂತಹ ಆ ವಿಚಿತ್ರವೂ ವಿಲಕ್ಷಣವೂ ಆದ ಘಟನೆಗಳಿಂದ ಅವನ ಗರ್ವ ಇಳಿದು ಹೋಗಿತ್ತು. ಇದಕ್ಕೆ ಮೊದಲು ಅವನು ಇದುವರೆಗೂ ಒಳಿತು ಕೆಡುಕುಗಳನ್ನೋ, ಹಿಂದುಮುಂದುಗಳನ್ನೋ ಆಲೋಚನೆ ಮಾಡುತ್ತಿರಲಿಲ್ಲ. ಆದರೆ ಈಗ ತನಗೆ ಕಾಲಯೋಗ ಕೂಡಿ ಬಾರದ್ದರಿಂದಲೇ ಎಲ್ಲದರಲ್ಲಿಯೂ ಅಪಜಯವಾಗುತ್ತಿರುವಂತೆ ಕಾಣತೊಡಗಿತು ಅವನಿಗೆ. ಮೂಢ ನಂಬುಗೆಗಳೆಲ್ಲಾ ನಿಜವಿರುವಂತೆ ಕಾಣುತ್ತಿತ್ತು ಈಗ.

ಹೀಗೆ ಕಾಲ ಕಳೆಯುತ್ತಿರುವಂತೆ ವೀರಸಿಂಹನಲ್ಲಿದ್ದ ಗರ್ವವು ತಗ್ಗುತ್ತಾ ಬರುತ್ತಿದ್ದುದನ್ನು, ಅವನ ದುಷ್ಟ ಸ್ವಭಾವವು ಮತ್ತೆ ಗಟ್ಟಿಪಡಿಸುತ್ತಾ ಹೋಯಿತು. ತನ್ನಂತಹ ವೀರಯೋಧನು ಇಷ್ಟೊಂದಕ್ಕೆ ಹೇಡಿಯಾಗುವುದು ನಾಚಿಕೆಕೇಡು ಎಂದುಕೊಂಡನು. ಈ ಪರಿಸ್ಥಿತಿಯಲ್ಲಿ ಒಂದು ದಿನ ಹೊಸ ಸುದ್ದಿಯೊಂದು ಬಂತು.



Scanned by CamScanner



ಇಬ್ಬರು ಗೂಢಚಾರರು ಬಂದು, ವೀರಸಿಂಹನ ಪಥಕಗಳಿಗೆ ಅಡ್ಡ ತಗಲುವ ಯುವಕರಿಗೆ ಅಮೃತಪುರಿ ಮಾತ್ರವಲ್ಲದೆ, ಶಂಕರವರ್ಮನು ಪಾಲಿಸುವ ಚಿಕ್ಕ ರಾಜ್ಯವಾದ ಜಯಪುರಿಯಿಂದ ಕೂಡಾ ಸಹಾಯ ದೊರಕುವುದೆಂಬ ಸಂಗತಿಯನ್ನು ಹೇಳಿದರು.

ಅಮೃತಪುರಿಯನ್ನು ಕಬಳಿಸಬೇಕೆಂಬ ವೀರಸಿಂಹನ ಕೋರಿಕೆ ನೆರವೇರದೆ ಹೋಯಿತು. ಇನ್ನುಮೇಲೆ ನೆರವೇರುವ ಅವಕಾಶ ಕೂಡಾ ಇಲ್ಲದೆ ಹೋಯಿತು. ಏಕೆಂದರೆ ಅಮೃತಪುರಿ ಈಗ ಸೈನಿಕ ಬಲವನ್ನು ಚೆನ್ನಾಗಿ ವೃದ್ಧಿಪಡಿಸಿಕೊಂಡಿದೆ. ರಾಜನು ಅನಾರೋಗ್ಯದಿಂದ ಪೂರ್ತಿ ಗುಣವಾಗಿದ್ದಾನೆ. ಇನ್ನು ಬೇಕಾದರೆ ವೀರಸಿಂಹನು ಶಂಕರವರ್ಮನ ಮೇಲೆ ಹಗೆ ತೀರಿಸಲು ನೋಡಬಹುದು. ಅವನನ್ನು ಬಗ್ಗಿಸುವುದು ತನಗೇನೂ ಕಷ್ಟವಾಗದೆಂದು ವೀರಸಿಂಹನಿಗೆ ತೋರಿತು. ಕಾರಣವೇನೆಂದರೆ, ಶಂಕರವರ್ಮನು ಈಗ ತನ್ನ ಸಂಪತ್ತನ್ನು ನೋಡಿ ಹೆಮ್ಮೆಯಿಂದ ಉಬ್ಬಿ ಹೋಗುತ್ತಿದ್ದಾನೆ. ಇತ್ತೀಚೆಗೆ ಅವನಿಗೆ ರಹಸ್ಯ ನಿಧಿ ಬೇರೆ ಸಿಕ್ಕಿದೆ. ಪೂರ್ವಿಕರ ಶಿಥಿಲ ಭವನಗಳನ್ನು ಅಗೆಯಿಸುವಾಗ ಕನಕ ದುರ್ಗೆಯ ರೂಪದಲ್ಲಿರುವ ಬಂಗಾರದ ವಿಗ್ರಹವು ಕಂಡುಬಂದಿದೆ. "ಬಹಳ ಭಾರವಿರುವ ಅತ್ಯದ್ಭುತವಾದ ಆ ಸುಂದರ ವಿಗ್ರಹ ನೋಡಲು ನೂರು ಕಣ್ಣುಗಳು ಸಾಲವು !" ಎಂದು ಉತ್ಸಾಹದ ಮಾತುಗಳನ್ನು ಹೇಳಿದನು ಮಂತ್ರಿ ವೀರಸಿಂಹನೊಂದಿಗೆ.

"ಆ ವಿಗ್ರಹವು ಅಂದವಾಗಿದೆಯೋ, ವಿಕಾರವಾಗಿದಿಯೋ ಅದೆಲ್ಲಾ ನಮಗೆ ಅನಾವಶ್ಯಕ. ಅದು ಬೆಲೆಬಾಳುವ ಬಂಗಾರದ್ದಾದರೆ ಸಾಕು, ಬಂಗಾರ ! ಈಗ ನಮಗೆ ಬೇಕಾದ್ದು ಬಂಗಾರ ! ಬಂಗಾರ ! ಧಾನ್ಯಗಳ ವಿನಿಮಯದಿಂದ ಆಯುಧ ಕೊಂಡು ಕೊಳ್ಳಬೇಕೆಂಬ ನಮ್ಮ ಪಥಕವು ಫಲಿಸದೆ ಹೋಗಿದೆ. ಬಂಗಾರದಿಂದ ಎಷ್ಟು ಆಯುಧಗಳನ್ನಾದರೂ ಕೊಂಡುಕೊಳ್ಳಬಹುದು !" ಎಂದನು ವೀರಸಿಂಹ.

ಪಕ್ಕದಲ್ಲೇ ಇದ್ದು ಅವರ ಮಾತುಗಳನ್ನು ಕೇಳುತ್ತಿದ್ದ ಸೇನಾಧಿಪತಿ ಸರ್ಪದಂತನು, "ಪ್ರಭುಗಳೇ, ಜಯಪುರಿಯ ಮೇಲೆ ದಂಡೆತ್ತಲು ಅಪ್ಪಣೆಯೇ ?" ಎಂದು ಕೇಳಿದನು.

"ಛಿ ಛೀ ! ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ ? ಮೊಲವನ್ನು ಬೇಟೆಯಾಡಲಿಕ್ಕೋ ನಾವು ನಿನ್ನನು ಸುಮೇಧದ ಸೇನಾಧಿಪತಿಯಾಗಿ ಮಾಡಿದ್ದು ? ಜಯಪುರಿಗೆ ಸೈನ್ಯವೇ ಇಲ್ಲ, ಅದರ ಸರಿಹದ್ದುಗಳನ್ನು ಒಂದು ಕಡೆಯಲ್ಲಿ ಸುಮೇಧವೂ, ಮತ್ತೊಂದು ಕಡೆಯಲ್ಲಿ ಅಮೃತಪುರಿಯೂ ರಕ್ಷಿಸುತ್ತಿವೆ. ಅಷ್ಟೇ ಅಲ್ಲ. ನಾವು ಜಯಪುರಿಯ ಮೇಲೆ ದಂಡೆತ್ತಿಬಿಟ್ಟರೆ, ಅದನ್ನು ರಕ್ಷಿಸಲು ಅಮೃತಪುರಿಯ ಸೇನೆಗಳು ಬರಬಹುದು. ಅವುಗಳನ್ನು ಇದಿರಿಸಿ ಹೋರಾಡುವ ಶಕ್ತಿ ನಿನ್ನ ಸೈನ್ಯಕ್ಕೆ ಇದೆಯೆ ?" ಎಂದು ಕೇಳಿದನು ವೀರಸಿಂಹ.



Scanned by CamScanner

ಅದಕ್ಕೆ ಉತ್ತರ ಹೇಳಲು ಸಾಧ್ಯವಾಗದೆ ಸರ್ಪದಂತನು ನೆಲ ನೋಡತೊಡಗಿದನು. ವೀರಸಿಂಹನು ಮತ್ತೆ ಮುಂದುವರಿಸಿ, "ಅದಕ್ಕೇ ಹೇಳುತ್ತೇನೆ. ನಾವು ಜಯಪುರಿಯ ಮೇಲೆ ದಂಡೆತ್ತುವ ಗೊಡವೆಗೇ ಹೋಗಬಾರದು. ಆದರೆ ಆ ರಾಜ್ಯಕ್ಕೆ ನಾವು ಬಹಳ ಕಾಲದಿಂದ ರಕ್ಷಣೆ ಕಲ್ಪಿಸಿಕೊಂಡಿದ್ದೇವೆಯಷ್ಟೆ? ಶಂಕರವರ್ಮನಿಂದ ಕಪ್ಪ ವಸೂಲು ಮಾಡಬಹುದು. ಈಗಲೇ ಆ ಸಂಗತಿಯನ್ನು ಶಂಕರವರ್ಮನಿಗೆ ತಿಳಿಸೋಣ. ನಮ್ಮ ಆಜ್ಞೆಯನ್ನು ಉಲ್ಲಂಘಿಸುವ ಧೈರ್ಯ ಶಂಕರವರ್ಮನಿಗೆ ಬರಲಿಕ್ಕಿಲ್ಲ" ಎಂದನು.

*    *    *

ಜಯಪುರಿಯಲ್ಲಿ ಈಗ ಬಹಳ ಆನಂದ ಕೋಲಾಹಲ ಕಾಣುತ್ತಿತ್ತು. ಎಲ್ಲಿ ನೋಡಿದರೂ ಆನಂದೋತ್ಸವಗಳು. ಪುರಾತನ ಭವನಗಳ ಶಿಥಿಲಗಳ ಅಡಿಯಿಂದ ಸುಂದರವಾದ ಬಹು ದೊಡ್ಡ ಸುವರ್ಣ ವಿಗ್ರಹ ಎದ್ದು ಬಂದಿದೆ. ನಿಗಿನಿಗಿ ಹೊಳೆಯುವ ಆ ಶುದ್ಧ ಬಂಗಾರದ ವಿಗ್ರಹದ ಮೇಲೆ ಸಣ್ಣ ಗೀರುಗೆರೆ ಕೂಡಾ ಇಲ್ಲ. ಅದನ್ನು ನೋಡಿ ಶಂಕರವರ್ಮ ರಾಜನು ಪರಮಾನಂದದಿಂದ, ಆ ವಿಗ್ರಹವನ್ನು ಪ್ರತಿಷ್ಠಿಸಬೇಕೆಂದು ಚಿಕ್ಕ ಗುಡಿಯೊಂದನ್ನು ಕಟ್ಟಿಸಿದನು. ಸುಂದರವಾಗಿ ನಿರ್ಮಿಸಲ್ಪಟ್ಟ ಆ ಗುಡಿಯಲ್ಲಿ ವಿಗ್ರಹ ಪ್ರತಿಷ್ಠೆಯ ಮುಹೂರ್ತಕ್ಕೂ ದಿನ ನಿಶ್ಚಯವಾಯಿತು.

ಶಂಕರವರ್ಮ ರಾಜನು ಉದ್ಯಾನದಲ್ಲಿ ವಿಶ್ರಾಂತಿಯಾಗಿ ಕುಳಿತಿದ್ದನು. ಆಗ ಒಬ್ಬ ಭಟನು ಬಂದು "ಪ್ರಭೂ, ಶಾಂತಿಪುರದಿಂದ ದೂತನು ಬಂದಿದ್ದಾನೆ" ಎಂದನು.

ಆ ಮಾತು ಶಂಕರವರ್ಮ ಆನಂದಕ್ಕೆ ಪೆಟ್ಟು ಬಿದ್ದಂತೆ ಜುಪ್ಪೆನಿಸಿ, "ಶಾಂತಿಪುರದಿಂದ ದೂತನೇ! ಅಂದರೆ ವೀರಸಿಂಹ ಕಳಿಸಿದ್ದು!" ಎಂದು ಸ್ವಲ್ಪ ತಡೆದು, "ಉಂ. ಕರೆದುಕೊಂಡು ಬಾ" ಎಂದನು.



ಸ್ವಲ್ಪ ಹೊತ್ತಿಗೆ ದೂತನೊಬ್ಬನು ಅಲ್ಲಿಗೆ ಬಂದು ಶಂಕರವರ್ಮನಿಗೆ ನಮಸ್ಕಾರ ಮಾಡಿ, "ಪ್ರಭೂ, ವೀರಸಿಂಹ ಮಹಾರಾಜರು ನಿಮಗೆ ತಮ್ಮ ಶುಭಾಕಾಂಕ್ಷೆಗಳನ್ನು ತಿಳಿಯಪಡಿಸುತ್ತ, ನಿಮ್ಮಿಂದ ಅವರಿಗೆ ಬರಬೇಕಾಗಿರುವ ಬಾಕಿಯನ್ನು ನೆನಪು ಮಾಡಲು ಹೇಳಿದ್ದಾರೆ" ಎಂದನು.

"ನನ್ನ ಹತ್ತಿರ ಬಾಕಿ ಇದೆಯೇ? ಹಾಗೇನೂ ಇಲ್ಲವಲ್ಲಾ? ಯಾರಿಗೂ ಯಾವ ಬಾಕಿಯೂ ನನಗಿಲ್ಲ" ಎಂದು ಹೇಳಿದನು ಶಂಕರವರ್ಮ.

"ಸುಮೇಧ ರಾಜ್ಯವು ನಿಮ್ಮ ರಾಜ್ಯವನ್ನು ರಕ್ಷಿಸುವ ಕರ್ತವ್ಯದಲ್ಲಿರುವುದರಿಂದಲೇ ನಿಮ್ಮ ರಾಜ್ಯ ಸುರಕ್ಷಿತವಾಗಿರುವುದೆಂದು ನಿಮಗೆ ತಿಳಿಯದ್ದಲ್ಲ. ಆದ್ದರಿಂದ ನೀವು ನಮ್ಮ ರಾಜ್ಯಕ್ಕೆ ಕಪ್ಪ ಕಟ್ಟಬೇಕಾಗಿತ್ತು. ಆ ಬಾಕಿಗಳನ್ನು ಸೇರಿಸಿ ಸರಿಯಾಗಿ ಕಪ್ಪ ಕಟ್ಟಬೇಕೆಂದು ನಮ್ಮ ವೀರಸಿಂಹ ಮಹಾರಾಜರು ಆಜ್ಞಾಪಿಸುತ್ತಾರೆ" ಎಂದನು ದೂತ.



Scanned by CamScanner



ಮಹೋತ್ಸವ ನೆರವೇರಿಸಲು ಸುಮೇಧದ ಪಾಲಕರನ್ನೂ, ಅಮೃತಪುರಿಯ ಪಾಲಕರನ್ನೂ ಆಹ್ವಾನಿಸಬೇಕೆಂದಿದ್ದೇವೆ" ಎಂದನು.

"ಪ್ರಭೂ, ನಮ್ಮ ಮಹಾರಾಜರು ಕಳುಹಿಸಿದ ಸಂದೇಶವನ್ನು ನಿಮಗೆ ತಿಳಿಸುವುದು ನನ್ನ ಬಾಧ್ಯತೆ. 'ಆ ವಿಗ್ರಹವನ್ನು ಮರ್ಯಾದೆಯಿಂದ ನಮಗೆ ಕೊಡತಕ್ಕದ್ದು. ತಪ್ಪಿದರೆ ಅದನ್ನು ನಾವೇ ಬಲವಂತದಿಂದ ತೆಗೆದುಕೊಂಡು ಹೋಗುತ್ತೇವೆ' ಇದು ನಮ್ಮ ಮಹಾರಾಜಾ ವೀರಸಿಂಹರ ಕೊನೆಯ ಸಂದೇಶ!" ಎಂದನು ದೂತ ತಲೆ ತಗ್ಗಿಸಿಕೊಂಡೇ.

ಶಂಕರವರ್ಮನು ಆಕಾಶದ ಕಡೆಗೆ ನೋಡುತ್ತ, "ಓಹೋ! ಹಾಗೋ ಸಂಗತಿ? ಆ ಕನಕದುರ್ಗಾ ಸುವರ್ಣ ವಿಗ್ರಹವನ್ನು ನಿಮಗೆ ಕೊಡಲು ನಾನು ಸಿದ್ಧನಾಗಿಲ್ಲವೆಂದು ನಿಮ್ಮ ರಾಜನಿಗೆ ಹೇಳಿಬಿಡು. ಬೇಕಾದರೆ ಸ್ವಲ್ಪ ಧನ ಕೊಡಬಹುದು. ಅದು ಕೂಡಾ ನಿಮ್ಮ ಅನ್ಯಾಯದ ಅಪೇಕ್ಷೆಗೆ ತಲೆ ತಗ್ಗಿಸಿದ ಹಾಗೇ ಆಗುತ್ತದೆ. ಈಗಿನ ರಾಜನಿಗಿಂತ ಮೊದಲು ಸುಮೇಧವನ್ನು ಪಾಲಿಸಿದ ಧರ್ಮ ಪ್ರಭುಗಳಾರೂ ನಮ್ಮಂಥವರಿಂದ ಹೀಗೆಲ್ಲಾ ಕಪ್ಪಕಾಣಿಕೆಯ ಬಗ್ಗೆ ಆಶೆಪಡಲೇ ಇಲ್ಲ. ಆಯಿತು. ನಾವು ಹೇಳಬೇಕಾದ್ದು ಹೇಳಿಯಾಯಿತು. ಇನ್ನು ನೀನು ಹೋಗಬಹುದು" ಎಂದು ಹೇಳಿದನು.

ದೂತನು ಶಂಕರವರ್ಮನಿಗೆ ನಮಸ್ಕಾರ ಮಾಡಿ ಅಲ್ಲಿಂದ ಹೋಗಿಬಿಟ್ಟನು.

"ಹಾಗೇನು?" ಎಂದು ಶಂಕರವರ್ಮನು ಸ್ವಲ್ಪ ಹೊತ್ತು ಮೌನವಾಗಿದ್ದು, "ಸರಿಯೆ. ಹಾಗಿದ್ದರೆ ನಿಮ್ಮ ರಾಜರು ನಮ್ಮಿಂದ ಏನನ್ನು ಆಶಿಸುತ್ತಾರೆ?" ಎಂದು ಕೇಳಿದನು.

"ನಿಮಗೆ ಲಭಿಸಿದ ಸ್ವರ್ಣದ ಕನಕದುರ್ಗಾ ವಿಗ್ರಹವನ್ನು ನಮ್ಮ ಮಹಾರಾಜರಿಗೆ ಒಪ್ಪಿಸಿದರೆ ಅವರಿಗೆ ಸಂತೋಷವಾಗುತ್ತದೆ" ಎಂದನು ದೂತ.

ಆ ಮಾತು ಕೇಳಿ ಶಂಕರವರ್ಮನು ಬೆಚ್ಚಿಬಿದ್ದನು. ಆದರೆ ತನ್ನ ಅದುರಿಕೆ ಹೊರಕ್ಕೆ ತಿಳಿಯದಂತೆ ತಡೆದುಕೊಂಡು, "ಆ ಕನಕದುರ್ಗಾ ವಿಗ್ರಹವನ್ನು ನಿಮ್ಮ ಮಹಾರಾಜರಿಗೆ ಮಾತ್ರವೇ ಅಲ್ಲ. ಬೇರೆ ಯಾರಿಗೂ ಕೊಡಲಿಕ್ಕೆ ನನಗೆ ಅಧಿಕಾರವಿಲ್ಲ. ನಾವು ಹೊಸತಾಗಿ ಕಟ್ಟಿದ ಗುಡಿಯಲ್ಲಿ ಅದನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠಿಸಬೇಕೆಂದಿದ್ದೇವೆ. ಆದರೂ ಆ ಗುಡಿ ಬಹಳ ಚಿಕ್ಕದು. ಇನ್ನೊಂದು ದೊಡ್ಡ ಆಲಯವನ್ನು ನಿರ್ಮಿಸಿ, ವಿಗ್ರಹದ ಪ್ರತಿಷ್ಠಾಪನೆಗೆ

* * *

ಆ ದೂತನು ಹಿಂದಿರುಗುತ್ತ ಸುಮೇಧ ರಾಜ್ಯದ ಸರಿಹದ್ದಿನೊಳಗೆ ಪ್ರವೇಶಿಸಿ, ವೀರಸಿಂಹನ ಆಜ್ಞೆಯ ಪ್ರಕಾರ ಅಲ್ಲಿ ಸೈನಿಕರ ಸಮೇತನಾಗಿ ಸಿದ್ಧನಾಗಿದ್ದ ಸೇನಾಧಿಪತಿ ಸರ್ಪದಂತನೊಂದಿಗೆ, ಶಂಕರವರ್ಮನು ಕನಕದುರ್ಗಾ ವಿಗ್ರಹವನ್ನು ಕೊಡಲು ನಿರಾಕರಿಸಿದ ಸಂಗತಿಯನ್ನು ಹೇಳಿದನು.



Scanned by CamScanner

ಕೂಡಲೇ ಸರ್ಪದಂತನು ದಳನಾಯಕರನ್ನು ನೋಡಿ, "ಈ ಕ್ಷಣವೇ ನಾವು ಜಯಪುರಿಯ ಸಾಮಂತರಾಜನ ಮನೆಗೆ ಹೊರಡಬೇಕು. ಅಲ್ಲಿ ನಮ್ಮನ್ನು ತಡೆಯುವವರಾರೂ ಇರಲಾರರೆಂದು ನಂಬಬಹುದು. ತಡಮಾಡಿದರೆ..." ಎಂದು ಹೇಳುವುದರೊಳಗೆ "ನಿಲ್ಲಿಸು!" ಎಂಬ ಗಂಭೀರ ಕಂಠ ಸ್ವರವು ಕೇಳಿಸಿತು.

ಸರ್ಪದಂತನು ಕೋಪದಿಂದಲೂ ಆಶ್ಚರ್ಯದಿಂದಲೂ ಅತ್ತಿತ್ತ ನೋಡಿದನು. ಚಿಕ್ಕ ಚಿಕ್ಕ ಮರಗಳೂ, ಪೊದರುಗಳೂ ಕಾಣುತ್ತಿದ್ದುವು. ಬೇರೆ ಏನೂ ಕಾಣಲಿಲ್ಲ.

ಆಗ ರೊಯ್ಯನೆ ಬಂದ ಒಂದು ಬಾಣವು ಸರ್ಪದಂತನ ಹತ್ತಿರ ತುಸು ಎತ್ತರ ಜಾಗೆಯ ನೆಲಕ್ಕೆ ಚುಚ್ಚಿಕೊಂಡಿತು. ಅಲ್ಲಿ ನಿಂತಿದ್ದ ಸೈನಿಕರು ಹೆದರಿಬಿದ್ದರು. ಸರ್ಪದಂತನು ಆ ಬಾಣವನ್ನು ತೆಗೆದು ಅದರಲ್ಲಿ ಸುತ್ತಿಕೊಂಡ ಲೇಖವನ್ನು ತೆಗೆದು ಹೀಗೆ ಓದಿದನು:

"ಎಚ್ಚರ! ಜಯಪುರಿಯ ಶಾಂತಿಗೆ ಭಂಗ ತರಬೇಡಿ! ಶಂಕರವರ್ಮರನ್ನು ಬಿಟ್ಟು ಹಿಂದಿರುಗಿ ಹೋಗಿಬಿಡಿ! ಇದು ಮುನ್ನೆಚ್ಚರಿಕೆ!—ಯುವರಾಜ ಸಂದೀಪನ ಆಜ್ಞೆ!"

"ಯುವರಾಜ ಸಂದೀಪನ ಆಜ್ಞೆ! ಇದಕ್ಕೆ ಮೊದಲು ಬಂದ ಎಚ್ಚರಿಕೆಗಳಲ್ಲಿ ಹೆಸರೇನಿರಲಿಲ್ಲ. ಈಗ ಬಂಡಾಯಗಾರರಿಗೆ ಹೊಸ ನಾಯಕನೊಬ್ಬ ಇದ್ದಾನೆಂದಾಯಿತು! ಯಾರು ಯುವರಾಜ ಸಂದೀಪ?" ಸರ್ಪದಂತನ ಮನಸ್ಸಿನಲ್ಲಿ ಆಶ್ಚರ್ಯದೊಂದಿಗೆ ಭಯವೂ ತಲೆ ಎತ್ತಿತ್ತು. ತನ್ನನ್ನು ಬೆಂಬತ್ತಿ ಬರುವ ಶತ್ರುಗಳಿದ್ದಾರೆಂದು ತಿಳಿದೂ, ತಾನು ಹೇಗೆ ಸೈನಿಕರನ್ನು ನಡೆಸಲಿ? ಸರ್ಪದಂತನ ಗುಂಡಿಗೆ ದಡದಡಿಸತೊಡಗಿತು. ಹಾಗೆಂದು ಬರಿಗೈಯಲ್ಲಿ ಹಿಂದಿರುಗಿಬಿಟ್ಟರೆ ವೀರಸಿಂಹನ ಆಗ್ರಹವು



ಹೀನ ರೀತಿಯಲ್ಲಿ ತನ್ನ ಮೇಲೆ ಬೀಳುವುದನ್ನು ತಪ್ಪಿಸಲಾಗುವುದಿಲ್ಲ. ಈಗ ಸೇನಾಪತಿಯಾಗಿರುವ ಕರ್ಮಕ್ಕೆ ಮುಂದೆ ಹೋಗುವುದೊಂದೇ ಮಾರ್ಗ! ಅಂತಲೇ ಅವನು ಸೈನಿಕರನ್ನೂ ದಳನಾಯಕರನ್ನೂ ನೋಡಿ, "ನಡೆಯಿರಿ ಮುಂದಕ್ಕೆ!" ಎಂದು ಆಜ್ಞೆ ಮಾಡಿದನು.

* * *

ಆ ದಿನ ಸಾಯಂಕಾಲ ಜಯಪುರಿಯ ಪ್ರಜೆಗಳು ವಿಗ್ರಹ ಪ್ರತಿಷ್ಠೆಗೆ ಏರ್ಪಾಡು ಮಾಡುವುದರಲ್ಲಿ ನಿರತರಾಗಿದ್ದರು. ವೀರಸಿಂಹನಿಂದ ಶಂಕರವರ್ಮನಿಗೆ ಬಂದ ದೂತನ ಸಂಗತಿಯಾಗಲೀ, ಬೆದರಿಕೆಯ ಸಂದೇಶವಾಗಲೀ ಆ ಸಾರ್ವಜನಿಕರಿಗೆ ತಿಳಿಯದು. ಹುಣ್ಣಿಮೆಯ ದಿನವಾದ ನಾಳೆಯೇ ವಿಗ್ರಹದ ಪ್ರತಿಷ್ಠೆ. ಅದಕ್ಕೇ ಇಷ್ಟು ಸಂಭ್ರಮ.

ಇದ್ದಕ್ಕಿದ್ದ ಹಾಗೆ ಪರಕೀಯರಾದ ಸೈನಿಕರು ಅಣಿಯಣಿಯಾಗಿ ವೀರ ನಡಿಗೆಯಿಂದ ರಾಜಭವನದ



ಕಡಗೆ ನಡೆಯುವುದನ್ನು ನೋಡಿ ಅಚ್ಚರಿಯಿಂದ ಮೆಟ್ಟಿಬಿದ್ದು ಪುರಜನರು ಬೆಚ್ಚರಬೆರಗಾದರು. ಕೆಲವರು ಸ್ವಲ್ಪ ದೂರದಿಂದ ಆ ದಳಗಳನ್ನು ಬೆಂಬತ್ತಿಕೊಂಡು ನಡೆದರು. ಒಬ್ಬ ಯುವಕನು ಓಡಿಹೋಗಿ ಶಂಕರವರ್ಮ ರಾಜನಿಗೆ ಈ ಸಂಗತಿಯನ್ನು ತಿಳಿಸಿದನು.

ಅದನ್ನು ಕೇಳಿ ಶಂಕರವರ್ಮನು ಭವನದಿಂದ ಹೊರಗೆ ಬರುವುದಕ್ಕೂ, ಸರ್ಪದಂತನು ಅವನ ಮುಂದೆ ಬಂದು ನಿಲ್ಲುವುದಕ್ಕೂ ಮೇಳ ಬಿತ್ತು.

"ನಿಮಗೆ ಏನು ಬೇಕು?" ಎಂದು ಕೇಳಿದನು ಶಂಕರವರ್ಮ.

"ಕನಕದುರ್ಗಾದೇವಿಯ ಸ್ವರ್ಣ ವಿಗ್ರಹ!" ಎಂದನು ಸರ್ದದಂತ.

"ಆ ವಿಗ್ರಹವನ್ನು ಬಿಟ್ಟುಕೊಡಲಾರೆವೆಂದು ನಿಮ್ಮ ದೂತನೊಡನೆ ಹೇಳಿದೆವಲ್ಲಾ?" ಎಂದನು ಶಂಕರವರ್ಮ.

"ಬಿಟ್ಟುಕೊಡುವ ಹಾಗೆ ಮಾಡಲಿಕ್ಕೇ ಬಂದಿದ್ದೇವೆ. ಅಗತ್ಯವಿದ್ದರೆ ಬಲಪ್ರಯೋಗದಿಂದ ಎಳೆದುಕೊಂಡು ಹೋಗುತ್ತೇವೆ!" ಎಂದನು ಸರ್ಪದಂತ.

ಶಂಕರವರ್ಮನು ಸ್ವಲ್ಪ ಆಲೋಚನೆ ಮಾಡಿ, "ಬೆಲೆಬಾಳುವ ಮಾನವರಕ್ತದ ಒಂದು ಬೊಟ್ಟನ್ನು ಕೂಡಾ ನೆಲಕ್ಕೆ ಬೀಳಿಸಲಿಕ್ಕೆ ನನಗೆ ಇಷ್ಟವಿಲ್ಲ. ನಿಮ್ಮ ಇಷ್ಟದಂತೆ ಮಾಡಲು ನಾನು ಅಡ್ಡಿ ಬರುವುದಿಲ್ಲ. ನಾವಾಗಿ ಕೊಡುವುದೂ ಇಲ್ಲ. ಏನು ಮಾಡುವಿರೋ ಮಾಡಿ" ಎಂದನು ಶಂಕರವರ್ಮ.

ಆ ವಿಗ್ರಹವು ಎಲ್ಲಿರುವುದೆಂದು ತಿಳಿದಿದ್ದ ಗೂಢಚಾರರು ಸರ್ಪದಂತನನ್ನು, ಭವನದ ಬಲಬದಿಯಲ್ಲಿದ್ದ ಒಂದು ಕೋಣೆಯೊಳಗೆ ಕರೆದುಕೊಂಡು ಹೋದರು. ಅಲ್ಲಿರುವ ಕನಕದುರ್ಗೆಯ ಸ್ವರ್ಣ ವಿಗ್ರಹವನ್ನು, ಸರ್ಪದಂತನ ಆಜ್ಞೆಯ ಪ್ರಕಾರ ಸೈನಿಕರು ಬಹಳ ಕಷ್ಟಪಟ್ಟು ಎತ್ತಿಕೊಂಡರು.

ಆಗ ವೀರಸಿಂಹನು ಕಳುಹಿಸಿದ ದೂತನೊಬ್ಬನು ಅಲ್ಲಿಗೆ ಬಂದು ಸರ್ಪದಂತನ ಕಿವಿಯಲ್ಲಿ ರಹಸ್ಯವಾಗಿ ಏನೋ ಹೇಳಿದನು. ಬಂಡಾಯಗಾರರಿಗೆ ಗೊತ್ತಾಗದ ಹಾಗೆ ಆ ಬಂಗಾರದ ವಿಗ್ರಹವನ್ನು ಸುಮೇಧ ರಾಜ್ಯದೊಳಗೆ ಹೇಗೆ ಒಯ್ಯಬೇಕೆಂಬ ಉಪಾಯವನ್ನೇ ಹಾಗೆ ರಹಸ್ಯವಾಗಿ ಹೇಳಿ ಕಳುಹಿಸಲಾಗಿತ್ತು. ನದೀ ಮಾರ್ಗದಲ್ಲಿ ಅದನ್ನು ಒಯ್ದರೆ, ಬಂಡಾಯದ ಪುಂಡರು ನದಿಗೆ ಹಾರಿ ಅಷ್ಟೊಂದು ಸುಲಭವಾಗಿ ತಡೆಯಲು ಸಾಧ್ಯವಿಲ್ಲವೆಂದು ವೀರಸಿಂಹನ ಭಾವನೆ. ಹಾಗೆ ಅವನು ಹೇಳಿದಂತೆ ಸರ್ಪದಂತನು ಆ ವಿಗ್ರಹವನ್ನು ಸಾಗಿಸಿಕೊಂಡು ನದೀ ತೀರಕ್ಕೆ ಹೋಗಿ ತಲಪಿದನು.

ಅದೊಂದು ಸಣ್ಣ ಕವಲು ನದಿಯಾಗಿತ್ತು. ಸಾಧಾರಣವಾದೊಂದು ದೋಣಿಯಲ್ಲಿ ಇಬ್ಬರು ಭಟರು ವಿಗ್ರಹವನ್ನು ಹಿಡಿದುಕೊಂಡು ಕುಳಿತರು. ನಾಲ್ವರು ಹುಟ್ಟುಹಾಕಿ ದೋಣಿಯನ್ನು ನಡೆಸಲು

ತೊಡಗಿದರು. ದೋಣಿಗೆ ಸಮೀಪವಾಗಿ ನದಿಯ ಎರಡು ತೀರಗಳಲ್ಲಿಯೂ, ದೋಣಿ ಸಾಗುವ ಕಡೆಗೆ ಆಯುಧಗಳನ್ನು ಧರಿಸಿ ಸೈನಿಕರು ನಡೆದು ಕೊಂಡಿದ್ದರು. ಸರ್ಪದಂತನೂ ವಿಜಯ ಗರ್ವದಿಂದ ನಡೆಯುತ್ತಿದ್ದನು.

ಸ್ವಲ್ಪ ದೂರ ಹೋದ ಮೇಲೆ ಒಂದು ಕಡೆಯಲ್ಲಿ ನದಿಯ ಎರಡು ಕಡೆಗಳಲ್ಲಿ ದೊಡ್ಡ ಆಲದ ಮರಗಳಿದ್ದುವು. ಅವುಗಳ ಕೊಂಬೆಗಳು ನದಿಯ ಮೇಲ್ಭಾಗಕ್ಕೂ ಹರಡಿಕೊಂಡಿದ್ದುವು. ಎರಡು ಬದಿಯ ಸೈನಿಕರೂ ಆ ಮರಗಳ ಬುಡದಿಂದಾಗಿ ನಡೆಯ ತೊಡಗಿದರು. ಆಗ ಇದ್ದಕ್ಕಿದ್ದ ಹಾಗೆ ಸ್ವಲ್ಪ ದೂರದಲ್ಲಿ ಚಿತ್ರ ವಿಚಿತ್ರ ಶಬ್ದಗಳಿಂದ ಬೆಡಿ ಬಾಣಗಳು ಸಿಡಿಯುತ್ತ ಕಿಡಿಕಾರತೊಡಗಿದುವು. ಸೈನಿಕರೆಲ್ಲರೂ ಆಶ್ಚರ್ಯದಿಂದ ಆ ಕಡೆಗೆ ನೋಡಿದರು.

ಆಗ ಫಕ್ಕನೆ ಆಲದ ಮರದ ಮೇಲಿನಿಂದ ಎಂಥದೋ ಒಂದು ಭೂತಾಕಾರವು ದೋಣಿಯ ಮೇಲೆ ಇಳಿದು ಬರುವುದನ್ನು ನೋಡಿ ದೋಣಿಯಲ್ಲಿದ್ದವರು ಆ ಭೂತವು ತಮ್ಮ ಮೇಲೆ ಬೀಳದಂತೆ ಹೆದರಿ ಮೈಮಾಲಿಸಿಕೊಂಡರು.

ಅಷ್ಟರೊಳಗೆ ಬಂಗಾರದ ದುರ್ಗಾ ವಿಗ್ರಹವು ದೋಣಿಯಿಂದೆದ್ದು ಮೇಲೆ ಹೋಗಿಬಿಟ್ಟಿತು. ಇದು ಸ್ವಲ್ಪವೂ ಊಹಿಸಲಾಗದ ಘಟನೆ! ಕಣ್ಣು ಮುಚ್ಚಿ ಬಿಡಿಸುವುದರೊಳಗೆ ಹೀಗಾದುದನ್ನು ಗಮನಿಸಿ ದೋಣಿಯಲ್ಲಿದ್ದವರು ದಿಗ್ಭ್ರಾಂತರಾದರು.

ಒಬ್ಬ ಯುವಕನು ಆಲದ ಮರಕ್ಕೆ ಕಟ್ಟಿದ ಬಲವಾದ ಹಗ್ಗವನ್ನು ಒಂದು ಕೈಯಲ್ಲಿ ಹಿಡಿದು ಕೊಂಡು, ತಮ್ಮ ಮೇಲೆ ಹಾರಿ, ಮತ್ತೊಂದು ಕೈಯಿಂದ ಬಂಗಾರದ ವಿಗ್ರಹವನ್ನು ಸುಲಭವಾಗಿ ಎತ್ತಿಕೊಂಡು ಹೋಗಿ ಆಚೆಯ ತೀರವನ್ನು ಸೇರಿ ಬಿಟ್ಟನೆಂದು ದೋಣಿಯಲ್ಲಿದ್ದವರಿಗೆ ಅರ್ಥವಾಯಿತು. ಈಚೆಯ ತೀರದ ಭಟರ ಗಮನ ಇನ್ನೂ ಬೆಡಿ ಬಾಣಗಳ ಹಬ್ಬದ ದೃಶ್ಯವನ್ನು. ಅಲ್ಲಿ ಏನು ವಿಶೇಷ ವೆಂಬ ಪ್ರಶ್ನೆಯೊಂದಿಗೆ ನೋಡುತ್ತಲೇ ಇದ್ದರು.

ದೋಣಿಯಲ್ಲಿದ್ದವರು ಹೊರಳಿ ಎದ್ದು ನಡೆದುದನ್ನು ಅರ್ಥಮಾಡಿಕೊಂಡು, "ಹೋಯ್ತೋ ಹೋಯ್ತು! ಕೊಳ್ಳೇ ಹೋಯ್ತು! ಕೊಳ್ಳೇ! ವಿಗ್ರಹ ಕೊಳ್ಳೇ!" ಎಂದು ಕೂಗಿಕೊಂಡರು. ಅಷ್ಟರೊಳಗೆ ಕೊಳ್ಳೇಗಾರನು ಸಿದ್ಧವಾಗಿದ್ದ ಕುದುರೆಯ ಮೇಲೇರಿಕೊಂಡು ವಿಗ್ರಹದೊಂದಿಗೆ ಅರಣ್ಯದೊಳಗೆ ದೌಡಾಯಿಸಿಬಿಟ್ಟಿದ್ದನು.

ಸೈನಿಕರು ಕಣ್ಣಳವಿನ ದೂರದಲ್ಲಿ ಕುದುರೆಯ ಮೇಲೆ ಓಡಿಹೋಗುವ ಡಕಾಯಿತನನ್ನು ಆಶ್ಚರ್ಯ ದಿಂದ ನೋಡುತ್ತಿದ್ದರು. ಅವನು ಮಾಯವಾದರೂ ಸೈನಿಕರಿಗೆ ಎಚ್ಚರ ಬರಲಿಲ್ಲ. —(ಇನ್ನೂ ಇದೆ)



Scanned by CamScanner



# ಢಕಾಯಿತ ಯುವರಾಜ

## ೧೫

[ ಶಂಕರವರ್ಮನು, ತನ್ನ ಪೂರ್ವಿಕರ ಶಿಥಿಲ ಭವನಗಳನ್ನು ಕೆಡವಿಸಿ ಅಗೆಯಿಸುವಾಗ ಸಿಕ್ಕಿದ ಬಂಗಾರದ ಕನಕ ದುರ್ಗಾ ವಿಗ್ರಹವನ್ನು ವೀರಸಿಂಹನಿಗೆ ಒಪ್ಪಿಸಬೇಕೆಂಬ ಆಜ್ಞೆಯನ್ನು ನಿರಾಕರಿಸಿದನು. ಕೂಡಲೇ ಸರ್ಪದಂತನು, ಕೆಲವು ಮಂದಿ ಸೈನಿಕರೊಂದಿಗೆ ಆ ವಿಗ್ರಹವನ್ನು ಬಲವಂತವಾಗಿ ಎತ್ತಿಕೊಂಡು ದೋಣಿಯಲ್ಲಿ ಕೊಂಡೊಯ್ಯುವಾಗ, ಯಾರೋ ದೋಣಿಗೆ ಹಾರಿ ವಿಗ್ರಹವನ್ನು ಎತ್ತಿಕೊಂಡು ಹೋಗಿಬಿಟ್ಟರು. — ಆಮೇಲೆ ]

ದೋಣಿಯೊಳಗಿನ ಕೂಗು ಕೇಳಿ, ಗಾಬರಿಬಿದ್ದು ತನ್ನನ್ನು ತಾನು ಸಮಾಳಿಸಿಕೊಂಡ ಮೇಲೆ ಸರ್ಪದಂತನು ಅಧಿಕಾರ ದರ್ಪದ ಕಂಠದಿಂದ, ನಿಲ್ಲಿಸಿರಿ ಕೂಗೂ! ಏನದು ಹೇಡಿಕೂಗಾಟ! ನಿಲ್ಲಿಸಿರಿ ದೋಣಿ!" ಎಂದು ಆಜ್ಞೆ ಮಾಡುತ್ತಾ ಹತ್ತಿರ ಬಂದು, "ಎಲ್ಲಿದ್ದಾನೆ ಕೊಳ್ಳೇಗಾರ? ದೋಣಿಯೊಂದಿಗೇ ಈಜಿಕೊಂಡು ಬರಲಿಕ್ಕೆ ಅವನೇನು ಮೊಸಳೆಯೇ? ನಿಮಗೆಲ್ಲಾ ನಿದ್ದೆ ಬಂತೇನು? ಅಲ್ಲ ಸ್ವಪ್ನ ನೋಡಿ ಹೆದರಿ ಕೂಗುವಿರಾ?" ಎಂದು ಗದರಿಸಿದನು.

ದೋಣಿಯಲ್ಲಿದ್ದ ಭಟರು "ಆ ಮಾಯದ ಕಳ್ಳ ಮೇಲಿನಿಂದ ನಮ್ಮ ಮೇಲೆ ಹಾರಿ, ಮತ್ತೆ ಕಣ್ಣು ಬಿಡಿಸುವುದರೊಳಗೆ ವಿಗ್ರಹವನ್ನು ಮೇಲೆ ಒಯ್ದು, ಅದೋ ಅಲ್ಲಿ ಇಳಿದು ಕುದುರೇ ಮೇಲೆ ವಿಗ್ರಹ ಇಟ್ಟುಕೊಂಡು ಅತ್ತ ಓಡಿದ!" ಎಂದು ಹೇಳುತ್ತಾ ತಡಬಡಿಸಿಕೊಂಡು ತೀರಕ್ಕೆ ಇಳಿದರು. ಅಷ್ಟರಲ್ಲಿ ಆ ಕುದುರೇ ಸವಾರ ಮಾಯುವಾಗಿದ್ದ.

ಅವರು ಹೇಳಿದ ಸಂಗತಿಯನ್ನು ಅರ್ಥಮಾಡಿಕೊಳ್ಳಲಿಕ್ಕೇ ಸ್ವಲ್ಪ ಹೊತ್ತು ಬೇಕಾಯಿತು. "ಒಂದು ಕೈಯಲ್ಲಿ ಹಗ್ಗವನ್ನು ಹಿಡಿದುಕೊಂಡು ದೋಣಿ



Scanned by CamScanner



ಯಿಂದ ಹಾರುವುದೆಂದರೇನು? ಅಷ್ಟೊಂದು ಭಾರದ ವಿಗ್ರಹವನ್ನು ಲೀಲಾಜಾಲವಾಗಿ ಎತ್ತಿಕೊಂಡು ಆಚೆಯ ತೀರಕ್ಕೆ ಹೋಗಿ ಕುದುರೆಯ ಮೇಲೆ ಏರಿ ಓಡುವುದೆಂದರೇನು? ಇವರ ಮಾತು ಹೇಗೆ ನಂಬುವುದು? ದೋಣಿಯಲ್ಲಂತೂ ಆ ವಿಗ್ರಹವಿಲ್ಲ. ವಿಗ್ರಹವನ್ನು ನದಿಗೇ ಹಾಕಿ ಓಡಿದನೆ? ಶಂಕರ ವರ್ಮನ ಮನೆಯೊಳಗಿನಿಂದ, ನಾಲ್ವರು ದೃಢ ಕಾಯದ ಭಟರು ಹೊರಲಾಗದೆ ಹೊತ್ತುಕೊಂಡು ತಂದಂಥಾ ವಿಗ್ರಹ! ಅದನ್ನು ಒಂದೇ ಕೈಯಲ್ಲಿ ಎತ್ತುವುದೆಂದರೆ ಅವನು ಮನುಷ್ಯನೆ? ದೋಣಿಯವರ ಮೇಲೆ ಮಂತ್ರದ ಬೂದಿ ಚೆಲ್ಲಿದನೆ? ವಿಗ್ರಹವನ್ನು ನದಿಯೊಳಗೆ ಹಾಕಿ, ಯಾವುದೋ ಬೊಂಬೆಯನ್ನು ಕುದುರೆಯ ಮೇಲೆ ಒಯ್ದಂತೆ ಆಟ ತೋರಿಸಿದನೆ? ಇನ್ನು ನದಿಯಲ್ಲಿ ಹುಡುಕಿದರೆ ವಿಗ್ರಹ ಸಿಕ್ಕಬಹುದೆ? ಇಷ್ಟು ಹೊತ್ತು ನಮ್ಮ ಲಕ್ಷ್ಯವು ಬೇರೆ ಕಡೆಗಿರುವಂತೆ ಮಾಡಿ, ಈ ಸಂಧಿಯಲ್ಲಿ ಭಾರವಾದ ಆ ವಿಗ್ರಹವನ್ನು ನದಿಯೊಳಗಿನಿಂದ ಎತ್ತಿಕೊಂಡು ಹೋಗಿರಲೂ ಸಾಕು. "ಅಯ್ಯೋ! ಏನುಗತಿ ಬಂತಪ್ಪಾ! ಪ್ರಭುಗಳು ನನ್ನನ್ನೇನು ಮಾಡುವರೋ?" ಎಂದು ಸರ್ಪ ಸರ್ಪದಂತನು ಯೋಚಿಸಿಕೊಂಡಿರುವಾಗ, ಭಟರು ಅವನ ಮುಂದೆ ತಲೆತಗ್ಗಿಸಿ ಸುಮ್ಮನೆ ನಿಂತರು.

ಸೇನಾಧಿಪತಿಯಾದ ತಾನು ಸುಮ್ಮನಿದ್ದರೆ ಈ ಸೈನಿಕರ ಮುಂದೆ ಏನು ಬೆಲೆ ಬಂದೀತು? ಅವನು ಕಣ್ಣು ತಿರುಗಿಸುತ್ತ, ಹಲ್ಲುಕಡಿದು ಒಬ್ಬ ಭಟನನ್ನು ಎಳೆದು ಕೆಪ್ಪೆಗೊಂದು ತಪರಾಕಿ ಬಾರಿಸಿ, "ಕೈಲಾಗದ ನಿನಗೆ ಕತ್ತಿ ಏಕೆ? ಯಾವನೋ ಒಬ್ಬ ಪುಡಿಯಾಳು ಬಂದು ನಿಕ್ಷೇಪದಂಥ ವಿಗ್ರಹವನ್ನು ಎತ್ತಿಕೊಂಡು ಹೋಗುತ್ತಾ ಇದ್ದರೆ ನೀವೆಲ್ಲಾ ನಿದ್ದೆಯಾ ಮಾಡಿದ್ದು? ವೀರ ಸೈನಿಕರೆನ್ನಲು ನಾಚಿಕೆ ಇಲ್ಲಾ? ಸೀರೆ ಉಟ್ಟು ಬಳೆ ತೊಟ್ಟುಕೊಳ್ಳಬಾರದೆ?" ಎಂದು ಅರಚಿದನು.

ತಪರಾಕಿ ತಿಂದ ಸೈನಿಕನು ಅವಮಾನದಿಂದ ಕುಸಿದು ಹೋದನು. ಅವನಿಗೆ ಇದು ಪೆಟ್ಟಿನ ಮೇಲೆ ಬಿದ್ದ ಪೆಟ್ಟಾಗಿತ್ತು. ವಿಗ್ರಹ ಎತ್ತಿಕೊಂಡು ಹೋದ ಆ ಕಳ್ಳ ಕೂಡಾ ಇದೇ ಸೈನಿಕನ ಮೇಲೆ ದೊಡ್ಡ ಪೆಟ್ಟು ಹಾಕಿ ಅವನು ಇನ್ನೊಬ್ಬ ಸೈನಿಕನ ಮೇಲೆ ಬೀಳುವಂತೆ ಮಾಡಿದ್ದನು. ಆ ದಕಾಯಿತನು ದೋಣಿಯ ಮೇಲೆ ಹಾರಿದಾಗ ನದಿಯ ಎರಡು ಕಡೆಗಳಲ್ಲಿಯೂ ಆಯುಧಧಾರಿಗಳಾಗಿದ್ದ ಸೈನಿಕರು ಕೂಡಾ ಅವನನ್ನು ಹಿಡಿಯಲಾಗದೆ ಹೋಗಿದ್ದಾರೆ. ಹಾಗಿರುವಾಗ ತಾನು ಮಾತ್ರ ಹೇಗೆ ಹಿಡಿಯಲು ಸಾಧ್ಯ? ಇದನ್ನು ಸರ್ಪದಂತನೊಂದಿಗೆ ಹೇಳಬೇಕೆಂದು ತೋರಿತು ಅವನಿಗೆ. ಹಾಗೆ ಕೆಣಕಿ ಕೇಳಲು ಧೈರ್ಯ ಬಾರದೆ, ಸ್ವಲ್ಪ ಬುದ್ಧಿವಂತಿಕೆಯಿಂದ, "ಪ್ರಭೂ! ನಮ್ಮ ಅಷ್ಟು ಮಂದಿ ಯೋಧರ ಕಣ್ಣುಕಟ್ಟಿ ಕೇವಲ ಮನುಷ್ಯನೊಬ್ಬನು ಮಾತ್ರ ಆ

ಬಂಗಾರದ ವಿಗ್ರಹವನ್ನು ಎತ್ತಿಕೊಂಡು ಹೋದನೆಂದು ನೀವು ಭಾವಿಸುವಿರಾ ? " ಎಂದೂ ಕೇಳಿದನು.

" ಅಂದರೆ ಏನು ನಿನ್ನ ಅಭಿಪ್ರಾಯ ? " ಎಂದನು ಸರ್ಪದಂತ.

" ಅದು ದೈವಾಂಶದ ವಿಗ್ರಹವಾದ್ದರಿಂದ ಯಾವುದೋ ಶಕ್ತೀ ದೇವತೆಯೋ ಅದನ್ನು ಅಪಹರಿಸಿಕೊಂಡು ಹೋಗಿದೆ. ಡಕಾಯಿತನೂ ಅಲ್ಲ ಮಾನವ ಮಾತ್ರದವನೂ ಅಲ್ಲ ! " ಎಂದನು ಭಟ.

" ಹಾಗಿದ್ದೀತೆ ? " ಎಂದು ಹೇಳಿ, ಸುಮ್ಮನೆ ತಲೆಯಾಡಿಸಿ, " ಹಾಗಾದರೆ ಈ ಸಂಗತಿಯನ್ನು ನೀನೇ ಮಹಾರಾಜರ ಸಮಕ್ಷಮದಲ್ಲಿ ಹೇಳು " ಎಂದನು.

ಹೀಗೆ ಬರಿಗೈಯ ಭಟರೆಲ್ಲರೂ ಸರ್ಪದಂತನೊಂದಿಗೆ ಶಾಂತಿಪುರಕ್ಕೆ ಹೋದ ಮೇಲೆ, ವೀರಸಿಂಹನೊಂದಿಗೆ ವಿಗ್ರಹ ಕಳವಾಗಿ ಹೋದ ಅದ್ಭುತ ಸಂಗತಿಯನ್ನು ಉಪ್ಪು ಖಾರ ಹಚ್ಚಿ ಒಗ್ಗರಣೆ ಕೊಟ್ಟೇ ಹೇಳಿದರು. ಕಾರ್ಗತ್ತಲಿನ ರಾತ್ರಿ, ಭಯಂಕರವಾದ ಭೂತಾಕಾರ ಧುಮುಕಿದ್ದು, ಕ್ಷಣ ಮಾತ್ರದಲ್ಲಿ ವಿಗ್ರಹದೊಂದಿಗೆ ಮಾಯವಾಗಿ ಹೋದದ್ದು ಎಲ್ಲಾ ಹೇಳಿ ಬಚಾವಾದರು. ಸರ್ಪದಂತನಿಗೆ ಜೀವ ಬಂತು.

ಅವರ ಮಾತುಗಳನ್ನು ನಂಬಲು ವೀರಸಿಂಹನಿಗೆ ಸಾಧ್ಯವಾಗಲಿಲ್ಲ. ಒಟ್ಟಿನ ಮೇಲೆ ವಿಗ್ರಹವಿಲ್ಲ. ಇತ್ತೀಚೆಗೆ ಅವನು ತಲೆಹಾಕಿದ ಪ್ರತಿಕಾರ್ಯವೂ ಸೋತು ಸೋತು ಹೋಗುತ್ತಾ ಬಂದಿದೆ. ಒಂದು ವೇಳೆ ಯಾರಾದರೂ ತನ್ನ ಮೇಲೆ ಮಂತ್ರವೋ, ಮಾಟವೋ ಮಾಡಿರಬಹುದೆ ? ಅಂತಹ ಮಾಯದ ಮಂತ್ರವಾದಿಗಳಿರುವುದೂ ನಿಜವೆಂದು ಕೇಳಿದ್ದುಂಟು. ಅಂತಹುದಕ್ಕೆ ಪ್ರತೀಕಾರ ಹೇಗೆ ? ಅಂಥಾ ಪ್ರತಿಮಾಂತ್ರಿಕರೂ ಇದ್ದಾರಂತೆ ? ತನ್ನನ್ನು ಈ ಪೀಡೆಗಳಿಂದ ಕಾಪಾಡಬಲ್ಲ ಸಮರ್ಥನನ್ನು, ಗಟ್ಟಿಗನಾದ



ಭೂತವೈದ್ಯನನ್ನು ಎಲ್ಲಿ ಹುಡುಕಲಿ ? ವೀರಸಿಂಹನು ತೀವ್ರವಾಗಿ ಆಲೋಚನೆ ಮಾಡತೊಡಗಿದನು.

* * *

ಶಂಕರವರ್ಮ ರಾಜನ ಜಯಪುರಿಯಲ್ಲಿ ವಿಷಾದವು ಹರಡಿಕೊಂಡಿದ್ದಿತು. ಹೊಸತಾಗಿ ಕಟ್ಟಲ್ಪಟ್ಟ ಗುಡಿಯಲ್ಲಿ ಕನಕದುರ್ಗಾ ದೇವಿಯ ವಿಗ್ರಹವನ್ನು ಪ್ರತಿಷ್ಠಿಸಬೇಕೆಂದು ಆನಂದೋತ್ಸಾಹದಲ್ಲಿದ್ದ ಪ್ರಜೆಗಳಿಗೆ ಸರ್ಪದಂತನ ಬಲವತ್ಪ್ರವರ್ತನೆಯಿಂದ ದಿಗ್ಭ್ರಾಂತಿಯುಂಟಾಗಿ ವಿಷಾದಕ್ಕೆ ಮಾರ್ಪಟ್ಟಿತು. ಸುಮೇಧ ರಾಜ್ಯವನ್ನು ಪರಮ ದುಷ್ಟನು ಪಾಲಿಸುವ ಸಂಗತಿ ಗೊತ್ತಿದ್ದರೂ, ಅವನ ಕ್ರೂರದೃಷ್ಟಿ ಹೀಗೆ ತನ್ನ ಮೇಲೆ ಬೀಳುತ್ತದೆಂದು ಅವನು ಊಹಿಸಿರಲಿಲ್ಲ ! ಎಂತಹ ದೊಡ್ಡ ನಿರಾಶೆ !

ಶಂಕರವರ್ಮ ರಾಜನು ಏನೂ ಬಗೆಹರಿಯದವನಂತೆ ಕೋಣೆಯೊಳಗೆ ಕುಳಿತಿದ್ದನು. ಅವನ ಸಮೀಪಕ್ಕೆ ಹೋಗಲು ಯಾರಿಗೂ ಸಾಹಸ



Scanned by CamScanner



ಬರಲಿಲ್ಲ. ಆದರೆ ಶಂಕರವರ್ಮನ ಏಕಮಾತ್ರ ಕುಮಾರಿಯಾದ ಸುಕನ್ಯೆ ಮೆಲ್ಲನೆ ತಂದೆಯ ಹತ್ತಿರ ಬಂದು, "ಅಪ್ಪಾ, ಆ ದೇವತೆ ಮತ್ತೆ ನಮ್ಮ ಹತ್ತಿರಕ್ಕೇ ಬರುತ್ತಾಳೆಂದು ನನಗೆ ಅನಿಸುತ್ತದೆ. ಅವಳು ನಮ್ಮ ಕುಲದೇವಿಯಲ್ಲವೇನಪ್ಪಾ ? ಇಷ್ಟು ಕಾಲ ಭೂದೇವಿಯ ಮಡಿಲಲ್ಲಿ ಮಲಗಿದ್ದ ವಳು ಈಗ ಎಚ್ಚೆತ್ತಿದ್ದಾಳೆ. ಎಲ್ಲಿದ್ದರೂ ಬಂದೇ ಬರುತ್ತಾಳೆ !" ಎಂದಳು ಮಧುರ ಕಂಠಸ್ವರದಲ್ಲಿ.

ನಿಜಕ್ಕೂ ಆ ಕನಕದುರ್ಗಾ ವಿಗ್ರಹದ ಮೇಲೆ ಸುಕನ್ಯೆ ಅತ್ಯಂತ ಪ್ರೇಮವನ್ನೂ ಭಕ್ತಿಯನ್ನೂ ಬೆಳೆಸಿಕೊಂಡಿದ್ದಳು. ಶಂಕರವರ್ಮ ರಾಜನು ಆ ವಿಗ್ರಹ ಪ್ರತಿಷ್ಠಾಪನೆಯನ್ನು ಬಹಳ ಕೋಲಾಹಲ ದಿಂದ ನಡೆಸಲು ಪ್ರಯತ್ನಿಸಿದ್ದೇ ಮಗಳ ಇಚ್ಛೆ ಯಂತೆಯೇ. ಅಂತಹ ವಿಗ್ರಹವು ಶತ್ರುಗಳ ವಶಕ್ಕೆ ಸಿಕ್ಕಿದ ಕೂಡಲೇ ಸುಕನ್ಯೆಗೆ ಹೇಳಲಾಗದಷ್ಟು ಸಂಕಟ ವೆದ್ದಿತು. ಆದರೂ ಅವಳು ತನ್ನ ಸಂಕಟವನ್ನು ಹೊರಗೆ ತೋರಿಸಿಕೊಳ್ಳದೆ, ತಂದೆಯನ್ನು ಸಮಾಧಾನ ಪಡಿಸಲು ಪ್ರಯತ್ನಿಸುತ್ತಿದ್ದಾಳೆ ! ಅದನ್ನು ತಿಳಿದು ಶಂಕರವರ್ಮನು ಉಕ್ಕಿ ಹೊರಳುವ ತನ್ನ ದುಃಖ ವನ್ನು ಬಲವಂತದಿಂದ ತಡೆದುಕೊಳ್ಳಲು ಪ್ರಯತ್ನಿ ಸುತ್ತ, ಕುಮಾರಿಯನ್ನು ಸಮಾಧಾನಪಡಿಸಲು ತನ್ನ ಹತ್ತಿರ ಎಳೆದುಕೊಂಡನು.

"ಅಪ್ಪಾ !" ಎಂಬ ಇನ್ನೊಂದು ಕೀರವಾಣಿ ಆಪ್ಯಾಯಮಾನವಾಗಿ ಕಿವಿಗೆ ಬಿತ್ತು !

ಶಂಕರವರ್ಮನು ಆಶ್ಚರ್ಯದಿಂದ ತಲೆಯೆತ್ತಿ ಮೇಲೆ ನೋಡಿದನು. ಜಯಾನಂದ ಮುನಿಯ ಆಶ್ರಮದ ಗಿಳಿ ಮಲ್ಲಿ ಸ್ತಂಭದ ಮೇಲೆ ಕುಳಿತು ಕೊಂಡಿತ್ತು. ಅದೇಕೆ ಬಂದಿದೆ ?

ಶಂಕರವರ್ಮನು ಎದ್ದು ನಿಂತನು. ಮಲ್ಲೀ ಗಿಳಿ ಕಂಬದ ಮೇಲಿನಿಂದ ನೆಲದ ಮೇಲೆ ಹಾರಿ, ಕುಳಿತು ಹಿಂದಿರುಗಿ ನೋಡಿತು. ಹಾಗೆಯೇ ದೀಪಸ್ತಂಭದ ಮೇಲೆ ಕುಳಿತು ಮತ್ತೆ ಹಿಂದಿರುಗಿ ನೋಡಿತು. ಮಲ್ಲಿ ತನ್ನನ್ನು ಕರೆಯುತ್ತಿದೆ ಎಂದು ಅರ್ಥ ಮಾಡಿಕೊಂಡ ಶಂಕರವರ್ಮನು, ಅದನ್ನು ಅನುಸರಿಸಿ ಮುಂದಕ್ಕೆ ನಡೆದನು. ಸುಕನ್ಯೆ ಕೂಡಾ ತಂದೆಯ ಹಿಂದೆಯೇ ನಡೆದಳು.

ಸ್ವಲ್ಪಹೊತ್ತಿಗೆ ಮಲ್ಲೀ ಗಿಳಿ ಉದ್ಯಾನವನ ದೊಳಗೆ ಹೋಯಿತು. ಅಲ್ಲೆಲ್ಲಾ ಹಿಟ್ಟು ಚೆಲ್ಲಿದ ಹಾಗೆ ಬೆಳದಿಂಗಳು. ಗಿಳಿ ಮರದ ಹಾಗೆ ಬೆಳೆದ ಒಂದು ನಿಂಬೇ ಗಿಡದ ಗೆಲ್ಲಿನ ಮೇಲೆ ಎಗರಿ ಕುಳಿತಿತು. ಶಂಕರವರ್ಮನು ಅದನ್ನು ನೋಡುತ್ತಾ ನಡೆಯುತ್ತಿರಲು, ಸುಕನ್ಯೆ "ನೋಡಿದಿರಾ ಅಪ್ಪಾ ? ನಮ್ಮ ದೇವತೆ ನಮ್ಮ ಹತ್ತಿರವೇ ಬಂದುಬಿಟ್ಟಳು !" ಎಂದಳು ಅತ್ಯಂತ ಉತ್ಸಾಹದಿಂದ.

ಸರ್ಪದಂತನು ಎತ್ತಿಕೊಂಡು ಹೋದ ಕನಕ ದುರ್ಗೆಯ ಬಂಗಾರದ ವಿಗ್ರಹವು ದೊಡ್ಡದಾದ ದಾಳಿಂಬೇ ಗಿಡದ ಅಡಿಯಲ್ಲಿರುವುದು ಕಂಡಿತು !



Scanned by CamScanner

ಸುಕನ್ಯೆ ಬೇಗ ಬೇಗನೇ ಓಡಿ ಆ ವಿಗ್ರಹದ ಹತ್ತಿರ ಕುಳಿತು, ಆನಂದಬಾಷ್ಪ ಸುರಿಸುತ್ತ, "ಅಪ್ಪಾ, ನಾನು ಹೇಳಿದೆನಷ್ಟೆ ? ನಮ್ಮ ಕುಲದೇವಿ ನಮ್ಮ ಹತ್ತಿರ ಬರುತ್ತಾಳೆಂದು ? ನನ್ನ ಮನಸ್ಸಿಗೆ ಕಂಡದ್ದು ನಿಜವಾಯಿತು. ಬನ್ನಿ ಅಪ್ಪಾ ! ನೋಡಿ ಅಪ್ಪಾ !" ಎಂದಳು ಅತ್ಯಂತ ಉತ್ಸಾಹದಲ್ಲಿ.

ಶಂಕರವರ್ಮನಿಂದ ಮಾತಾಡಲು ಸಾಧ್ಯವಾಗ ಲಿಲ್ಲ. ಆನಂದಾಶ್ಚರ್ಯಗಳಿಂದ ಅವನ ಕಂಠವು ರುದ್ಧವಾಗಿತ್ತು. ವಿಗ್ರಹವು ಬಂದದ್ದೇನೋ ನಿಜವೆ. ಆದರೆ ಇಲ್ಲಿಗೆ ಹೇಗೆ ಬಂತು ? ಅದನ್ನು ಇಲ್ಲಿಗೆ ತಂದು ಹಾಕಿದವರು ಯಾರು ? ಶಂಕರವರ್ಮನು ಸುತ್ತುಮುತ್ತಲೂ ನೋಡಿದನು,

ಮಲ್ಲೀ ಗಿಳಿ ಕಿಲಕಿಲ ನಗಾಡಿತು. ಶಂಕರ ವರ್ಮನು ಆ ಗಿಳಿಯ ಕಡೆಗೆ ನೋಡಿದನು. ಅಲ್ಲಿದ್ದ ಮರದ ಹಿಂದೆ ನಿಂತಿದ್ದ ಸುಂದರ ಯುವಕನ ಹೆಗಲಲ್ಲಿ ಮಲ್ಲೀ ಗಿಳಿ ಕುಳಿತು ಕೀಕೀ ಎಂದು ಧ್ವನಿಸುತ್ತಿರಲು ಯುವಕನು ಮುಂದೆ ಬಂದನು.

ಆ ಯುವಕನು ಶಂಕರವರ್ಮನ ಹತ್ತಿರ ಬಂದು ನಮಸ್ಕಾರ ಮಾಡಿ, "ನಾನು ಯಾರೆಂದು ನಿಮಗೆ ಗೊತ್ತಿಲ್ಲ. ಆದರೆ ನಿಮ್ಮ ಸಂಗತಿಯನ್ನೆಲ್ಲಾ ಗುರು ದೇವರಾದ ಜಯಾನಂದ ಮುನಿಯವರು ನನಗೆ ಹೇಳಿದ್ದಾರೆ. ಆ ಮಹನೀಯರ ಮಲ್ಲೀ ಗಿಳಿ ನಿಮಗೆ ಗೊತ್ತಿದೆ ತಾನೆ ?" ಎಂದನು.

"ಆ ! ಆ ! ನೀನು ಯುವರಾಜ ಸಂದೀಪ ಕುಮಾರನಲ್ಲವೆ ?" ಎಂದನು ಶಂಕರವರ್ಮ ಅತ್ಯಾನಂದದಿಂದ.

"ಹೌದು. ನಿಮ್ಮಂಥವರ ಸೇವಕ ನಾನು !" ಎಂದನು ಯುವರಾಜ ಸಂದೀಪ.

ಮರುಕ್ಷಣವೇ ಶಂಕರವರ್ಮನು ಯುವರಾಜ ಸಂದೀಪನನ್ನು ಆಲಿಂಗಿಸಿಕೊಂಡು, "ನಾನು ನಿನ್ನ ದರ್ಶನಕ್ಕಾಗಿ ತುಂಬಾ ತಪಿಸಿಕೊಂಡಿದ್ದೆನಪ್ಪಾ ! ಇಷ್ಟು ದಿನಗಳ ಮೇಲೆ ದೇವರು ನನ್ನ ಅಪೇಕ್ಷೆ ಯನ್ನು ನೆರವೇರಿಸಿದನು. ಆ ದೇವನಿಗೆ ವಂದನೆ ಗಳು. ಆದರೂ ಸರ್ಪದಂತನು ಹಿಡಿದುಕೊಂಡು





ಹೋದ ವಿಗ್ರಹವು ಮತ್ತೆ ಹೇಗೆ ಬಂದಿತೋ ಗೊತ್ತಾಗಲಿಲ್ಲ !" ಎಂದು ಹೇಳಿದನು.

"ಆ ಕನಕದುರ್ಗಾ ದೇವತೆಯು ವಿಗ್ರಹವನ್ನು ತಂದು ನಿಮಗೆ ಕೊಡುವ ಮಹಾಭಾಗ್ಯವು ಆ ದೇವರೇ ನನಗೆ ಕರುಣಿಸಿದನು !" ಎಂದು ಹೇಳಿದನು ಯುವರಾಜ ಸಂದೀಪಕುಮಾರ.

"ಅದು ಹೇಗಪ್ಪಾ ಸಾಧ್ಯವಾಯಿತು ?" ಎಂದು ಕೇಳಿದನು ಶಂಕರವರ್ಮ. ದೋಣಿಯಲ್ಲಿ ಸರ್ಪ ದಂತನ ಭಟರಿಂದ ಹೇಗೆ ಎತ್ತಿಕೊಂಡು ಬಂದೆನೆಂಬು ದನ್ನು ಸಂದೀಪನು ಸಂಕ್ಷಿಪ್ತವಾಗಿ ಹೇಳಿದನು. ಅದನ್ನೆಲ್ಲಾ ಕೇಳಿ ಶಂಕರವರ್ಮನು, "ಆದರೂ ಅಷ್ಟೊಂದು ಭಾರವಾದ ವಿಗ್ರಹವನ್ನು ಒಂದೇ ಕೈಯಿಂದ ಎತ್ತಲು ಹೇಗೆ ಸಾಧ್ಯವಾಯಿತು ?" ಎಂದು ಆಶ್ಚರ್ಯದಿಂದ ಕೇಳಿದನು.

"ಆ ಸಂಗತಿಯನ್ನು ನೆನೆಯುವಾಗ ನನಗೂ ಆಶ್ಚರ್ಯವಾಗುತ್ತದೆ. ಇನ್ನೊಂದು ಸಾರಿ ಅಂತಹ ಕೆಲಸ ಮಾಡಬಲ್ಲೆನೇ ಎಂಬುದು ಅನುಮಾನವೇ. ಎಷ್ಟು ಭಾರವಾದ ವಸ್ತುವನ್ನಾದರೂ ಭೂಮ್ಯಾಕರ್ಷಣೆಯ ತೂಕಕ್ಕೆ ತಕ್ಕ ಹಾಗೆ ಮಧ್ಯದಲ್ಲಿ ಎತ್ತಿ ಹಿಡಿಯುವುದು ಸುಲಭವೆಂದು ಗುರುಗಳು ಹೇಳಿದ್ದಾರೆ. ವಿಗ್ರಹದ ಸೊಂಟದ ಭಾಗವು ಅಂತಹ ಕೇಂದ್ರ ಸ್ಥಾನವೆಂದುಕೊಂಡು, ಆ ಸಮಯಕ್ಕೆ ನನ್ನಲ್ಲಿ ಆವಹಿಸಿಕೊಂಡ ಯಾವುದೋ ಒಂದು ಶಕ್ತಿಯೂ ಸೇರಿದಂತೆ ತೋರಿತು. ಅದೆಂತಹ ಶಕ್ತಿಯೋ ಆ ದೇವಿಗೇ ಗೊತ್ತು !" ಎಂದನು ಸಂದೀಪ.

"ಹೌದಪ್ಪ. ನಿನಗೆ ಆ ಮಹತ್ತರ ಶಕ್ತಿ ಆ ದೇವತೆಯೇ ಕರುಣಿಸಿದ್ದಾಳೆ. ಆ ದೇವಿ ಮತ್ತೆ ಇಲ್ಲಿಗೇ ಬರಬೇಕೆಂದು ಸಂಕಲ್ಪಿಸಿಕೊಂಡಿದ್ದಾಳೆ. ಗುರು ಭಕ್ತನಾದ ನಿನ್ನ ಮೂಲಕ ಹೀಗೆ ಬಂದಿದ್ದಾಳೆ ! ನನ್ನ ಮಗಳು ಹೇಳಿಕೊಂಡೇ ಇದ್ದಳು ! ಹಾಗೇ ಆಯಿತು" ಎಂದು ಮಗಳನ್ನು ನೋಡಿದನು ಶಂಕರವರ್ಮ.

"ಹೌದಪ್ಪಾ ! ಜಯಾನಂದ ಮುನಿಯವರ ಪ್ರಿಯ ಶಿಷ್ಯನನ್ನೇ ನಮ್ಮ ಕುಲದೇವಿ ಆರಿಸಿಕೊಂಡಳು !" ಎಂದಳು ಸುಕನ್ಯೆ ಇಂಪಾದ ಸ್ವರದಲ್ಲಿ.

ಸಂದೀಪನು ಸುಕನ್ಯೆಯನ್ನು ಆಶ್ಚರ್ಯದಿಂದ ನೋಡಿದನು. ಅದನ್ನು ಗಮನಿಸಿ ಶಂಕರವರ್ಮನು, "ಯುವರಾಜಾ, ಇವಳು ನನ್ನ ಕುಮಾರಿ ಸುಕನ್ಯೆ. ಯುವರಾಜರೊಂದಿಗೆ ಹೇಗೆ ಮಾತಾಡಬೇಕೆಂದು ತಿಳಿಯದು. ಅದೆಲ್ಲಾ ಇವಳು ಇನ್ನು ಮೇಲೆ ಕಲಿಯಬೇಕು" ಎಂದನು.

"ಆದರೆ ನಿಜವನ್ನು ಹೇಳಲು ಇವಳಿಗೆ ಯಾರೂ ಕಲಿಸಬೇಕಾಗಿಲ್ಲವಷ್ಟೆ ?" ಎಂದು ನೆಗಾಡಿದನು ಯುವರಾಜ.

ಶಂಕರವರ್ಮನು ಮಗಳನ್ನು ನೋಡಿ, "ಯುವರಾಜರು ಪ್ರಸ್ತುತ ನಮ್ಮ ಅತಿಥಿಯಾಗಿದ್ದಾರೆ.



Scanned by CamScanner

ಇವರಿಗೆ ಸಕಲ ಮರ್ಯಾದೆಗಳನ್ನು ನೀಡಬೇಕಾದ್ದು ನಮ್ಮ ಕರ್ತವ್ಯವಾಗಿದೆ" ಎಂದು ಹೇಳಿದನು.

"ನಾನು ನಿಮ್ಮೊಂದಿಗೆ ರಾಜಭವನಕ್ಕೆ ಬರಲು ಸಿದ್ಧನೇ. ಆದರೆ ಬಹಳ ಹೊತ್ತು ಇರಲಾರೆನು. ಏಕೆಂದರೆ ನನ್ನ ಬರುವಿಕೆಗಾಗಿ ನನ್ನ ಮಿತ್ರರು ಆತುರದಲ್ಲಿ ಕಾದುಕೊಂಡಿದ್ದಾರೆ. ಮತ್ತೊಂದು ಮುಖ್ಯವಾದ ವಿಷಯವೇನೆಂದರೆ, ವೀರಸಿಂಹನು ಯಾವ ಕ್ಷಣದಲ್ಲಾದರೂ ನಿಮ್ಮ ಮೇಲೆ ಸೈನ್ಯವನ್ನು ಕಳುಹಿಸಬಹುದು. ನಾನೂ ನನ್ನ ಮಿತ್ರರೂ ನಿಮಗೆ ರಕ್ಷಣೆ ಕಲ್ಪಿಸಲು ಸಾಧ್ಯವಾದಷ್ಟೂ ಪ್ರಯತ್ನ ಮಾಡಬೇಕಾಗಿದೆ. ನೀವು ಕೂಡಾ ಎಚ್ಚರಿಕೆಯಲ್ಲಿರಬೇಕು" ಎಂದು ಹೇಳುತ್ತಾ ಯುವರಾಜ ಸಂದೀಪನು ದೂರದಲ್ಲಿದ್ದ ಇಬ್ಬರು ಮಿತ್ರರಿಗೆ ಅಲ್ಲೇ ಇರುವಂತೆ ಸನ್ನೆ ಮಾಡಿ, ಶಂಕರವರ್ಮನೊಂದಿಗೆ "ಇನ್ನು ಮನೆಗೆ ಹೊರಡಿರಿ, ಬೇಗ ಹೋಗಿಬಿಡುತ್ತೇನೆ" ಎಂದು ರಾಜಭವನಕ್ಕೆ ಹೊರಟನು.

ಯುವರಾಜನು ಆಸನದಲ್ಲಿ ಕುಳಿತ ಕೂಡಲೇ ಸುಕನ್ಯೆ ಅವನಿಗೆ ಏನೋ ಫಲಾಹಾರಗಳನ್ನು ತರಲು ಒಳಗೆ ಹೋದಳು. ಆಗ ಶಂಕರವರ್ಮನು ಸಂದೀಪನೊಂದಿಗೆ, "ಯುವರಾಜಾ, ನನ್ನ ಭದ್ರತೆಯ ವಿಷಯದಲ್ಲಿ ನನಗೆ ಅಷ್ಟೇನೂ ಚಿಂತೆ ಇಲ್ಲ. ನಿಮ್ಮ ಭದ್ರತೆಯೇ ನಮಗೆ ಬಹು ಮುಖ್ಯ. ನಿಜ ಹೇಳಬೇಕಾದರೆ ವೀರಸಿಂಹನು ಪ್ರಾಣದಿಂದ ಇರುವವರೆಗೆ ನಿಮಗೆ ಭದ್ರತೆ ಇಲ್ಲ. ಆ ದುಷ್ಟನನ್ನು ಇನ್ನೂ ಸಹಿಸಿಕೊಳ್ಳುವುದು ಒಳ್ಳೆಯದಲ್ಲವೆಂದು ನನಗೆ ಕಾಣುತ್ತದೆ. ಅವನ ಅಂತ್ಯ ನೋಡಲಿಕ್ಕೆ ಇದೇ ತಕ್ಕ ತರುಣ" ಎಂದನು.

"ಆ ವೀರಸಿಂಹನನ್ನು ಹತಮಾಡಲು ನಮಗೆ ಅನೇಕ ಅವಕಾಶಗಳು ಸಿಕ್ಕಿದ್ದುವು. ಆದರೂ ಅವನನ್ನು ಯುದ್ಧದಲ್ಲಿ ಸೋಲಿಸಬೇಕೆಂಬುದೇ ನಮ್ಮ ಆಶಯ. ಅವನು ನನ್ನ ತಂದೆಯನ್ನು ದುಸ್ತಂತ್ರದಿಂದ ತೊಲಗಿಸಿದನೆಂಬುದು ನಿಜವೇ. ಅದೇ ರೀತಿಯಲ್ಲಿ ಅವನನ್ನು ಕೊಲ್ಲಲು ನಮಗೆ ಇಷ್ಟವಿಲ್ಲ. ಅವನು ನಮ್ಮೊಂದಿಗೆ ಯುದ್ಧಮಾಡಿ, ಸೈನಿಕ ಬಲವನ್ನೆಲ್ಲಾ ಕಳೆದುಕೊಂಡು ಅನಂತರವೇ ಸಾಯಬೇಕು. ಒಂದು ವೇಳೆ ಯುದ್ಧದಲ್ಲಿ ನಾನೇ ಸೋತರೂ ಮನಃಪೂರ್ವಕವಾಗಿ ಒಪ್ಪಿಕೊಳ್ಳುತ್ತೇನೆ" ಎಂದನು ಗಂಭೀರಭಾವದಲ್ಲಿ ಸಂದೀಪಕುಮಾರ.

ಹರಿವಾಣದ ತುಂಬಾ ಫಲಾಹಾರ ಹಿಡಿದುಕೊಂಡು ಹಿಂದೆಯೇ ನಿಂತಿದ್ದ ಸುಕನ್ಯೆ ಅವನ ಮಾತು ಕೇಳುತ್ತಾ ಮೈಮರೆತಳು. ಯುವರಾಜನು ಹೇಳಿದ ಮಾತುಗಳು ಶಂಕರವರ್ಮನನ್ನು ತುಂಬಾ ಸಂತೋಷಪಡಿಸಿದುವು.

—(ಇನ್ನೂ ಇದೆ)






## ೧೬

[ ವೀರಸಿಂಹನ ಆಜ್ಞೆಯಂತೆ ಸರ್ಪದಂತನು ಶಂಕರವರ್ಮನಿಂದ ಬಂಗಾರದ ವಿಗ್ರಹವನ್ನು ವಶಪಡಿಸಿಕೊಂಡು, ನದಿಯ ಮೂಲಕ ಶಾಂತಿಪುರಕ್ಕೆ ಒಯ್ಯಲು ತೊಡಗಿದನು. ಆಗ ಯುವರಾಜ ಸಂದೀಪಕುಮಾರನು ನದಿಯ ನಡುವಿನಲ್ಲಿಯೇ ವಿಗ್ರಹವನ್ನು ವಶಪಡಿಸಿಕೊಂಡು ಶಂಕರವರ್ಮನಿಗೆ ತಂದುಕೊಟ್ಟನು. ಆಗತಾನೇ ಸಂದೀಪ ಕುಮಾರನನ್ನು ನೋಡಿ ಶಂಕರವರ್ಮನು ಅತ್ಯಂತ ಸಂತೋಷಪಟ್ಟನು. ಆಮೇಲೆ— —ಇನ್ನು ಓದಿರಿ ]

ಕೈಗೆ ಸಿಕ್ಕಿದ ಹಣ್ಣು ಜಾರಿಹೋದಂತೆ, ಭಟರು ಕಷ್ಟ ಸಾಹಸಗಳಿಂದ ತರುತ್ತಾ ಇದ್ದ ಬಂಗಾರದ ವಿಗ್ರಹವು ದೋಣಿಯಿಂದ ಮಾಯವಾಗಿ ಹೋಯಿತೆಂಬುದನ್ನು ಕೇಳಿ ವೀರಸಿಂಹನಿಗೆ ಸ್ವಲ್ಪ ಹೊತ್ತಿನವರೆಗೆ ಏನು ಹೇಳಲಿಕ್ಕೂ ತೋರದೆ ಗಂಭೀರ ಮೌನ ಮುದ್ರೆ ತಾಳಿದನು. ಅವನ ಎರಡು ಮುಷ್ಟಿಗಳೂ ಬಿಮ್ಮನೆ ಬಿಗಿದುಕೊಂಡುವು. ಅನಂತರ ಹಲ್ಲಿಗೆ ಹಲ್ಲು ತಿಕ್ಕಿಕೊಳ್ಳುತ್ತ, "ಹುಂ! ಮಾಯೆಗಳು! ಮಂತ್ರಗಳು! ಮಂತ್ರತಂತ್ರಗಳಂತಹ ಕ್ಷುದ್ರಶಕ್ತಿಗೆ ಹೆದರಿ ಸುಮ್ಮನಿರುವುದೆಂದರೇನು? ಹಾಗಿದ್ದರೆ ಸೈನ್ಯಗಳ ಗೊಡವೆ ಏಕೆ? ಸೇನಾನಾಯಕರೇಕೆ?" ಎಂದು ಆಗ್ರಹಾವೇಶದಲ್ಲಿ ಹೇಳಿಕೊಂಡನು.

ತನಗೆ ಕೇಳುವ ಹಾಗೆ ಹೇಳಿಕೊಂಡ ಮಾತಿಗೆ ಏನೂ ಹೇಳದಿದ್ದರೆ ಸೇನಾಧಿಪತಿ ಎಂಬ ದರ್ಪಕ್ಕೆ ಕುಂದು ಬಂದೀತೆಂದುಕೊಂಡು ಸರ್ಪದಂತನು ಇದ್ದ ಧೈರ್ಯವನ್ನು ಒಟ್ಟುಗೂಡಿಸಿ, "ಮಹಾಪ್ರಭೂ, ನಮ್ಮ ಹತ್ತಿರ ಸೈನಿಕ ಬಲವಿರುವುದೇನೋ ನಿಜವೇ. ಆದರೂ ಅತೀತ ಶಕ್ತಿಗಳನ್ನು ಅಲಕ್ಷ್ಯ ಮಾಡುವಂತಿಲ್ಲವೆಂದೇ ಕಾಣುತ್ತವೆ. ನಮ್ಮ ಮಾನವಶಕ್ತಿ ಅವುಗಳನ್ನಿದಿರಿಸಿ ಎಷ್ಟರವರೆಗೆ ಹೋರಾಡಬಲ್ಲುದೆಂದು



ಸರ್ಪದಂತಾ ! ಇಂಥಾ ಪುಕ್ಕಲು ಮಂತ್ರ ಹೇಳಿಕೊಂಡು ಸುಮ್ಮನೆ ನಿಂತಿರಲು ನಾಚಿಕೆಯಾಗುವುದಿಲ್ಲವೇನೊ ? ಈಗ ಎಲ್ಲಿ ಆ ಬಂಗಾರದ ವಿಗ್ರಹ ? " ಎಂದು ಸಭೆಯೇ ಮಾರ್ಮೊಳಗುವಂತೆ ಗರ್ಜಿಸಿದನು.

ಆಗಲೇ ಆಸ್ಥಾನದ ಪ್ರಧಾನ ಗೂಢಚಾರಿ ಅಲ್ಲಿಗೆ ಬಂದು ವೀರಸಿಂಹನಿಗೆ ಬಾಗಿ ನಮಸ್ಕಾರ ಮಾಡಿದನು.

" ಏನು ಸಮಾಚಾರ ? " ಕೇಳಿದನು ವೀರಸಿಂಹ.

" ಮಹಾಪ್ರಭೂ ! ನಮ್ಮ ಭಟರ ಕೈಯಿಂದ ಮಾಯವಾಗಿ ಹೋದ ಕನಕದುರ್ಗಾ ಸುವರ್ಣ ವಿಗ್ರಹವು ಈಗ ಶಂಕರವರ್ಮನ ರಾಜ್ಯದಲ್ಲಿದೆ. ಹೊಸತಾಗಿ ಕಟ್ಟಿದ ಗುಡಿಯಲ್ಲಿ ನಾಳೆಯೇ ವಿಗ್ರಹ ಪ್ರತಿಷ್ಠಾಪನೆ ನಡೆಯಲಿದೆ. ಅದಕ್ಕಾಗಿ ಏರ್ಪಾಡುಗಳು ಭರದಿಂದ ಅಲ್ಲಿ ಸಾಗುತ್ತಿವೆ " ಎಂದನು.

" ನಿಜವೇನು ? " ಎಂದು ಉತ್ಸಾಹದಿಂದ ಕೇಳಿದನು ವೀರಸಿಂಹ.

" ಮೂರುಮಾತಿಗೂ ನಿಜವೇ ಮಹಾಪ್ರಭೂ " ಎಂದನು ಗೂಢಚಾರಿ.

ಆ ಮಾತು ಕೇಳಿದ ಕೂಡಲೇ ವೀರಸಿಂಹನು ಆತ್ಮಾವೇಶದಿಂದ ಎದ್ದು ನಿಂತು " ಓಹೋ ! ಆ ವಿಗ್ರಹವನ್ನು ಕದ್ದುಕೊಂಡು ಬರಲಿಕ್ಕಾಗಿ ಯಾವ ಮಾಂತ್ರಿಕನನ್ನೋ ಆ ಶಂಕರವರ್ಮನೇ ನಿಯೋಗಿಸಿದ್ದಂದಾಯಿತು ! ಆ ದುಷ್ಟನಿಗೆ, ಕೈಲಾಗದ ನೀಚನಿಗೆ ಹಾಳು ಮಾಂತ್ರಿಕನ ಕ್ಷುದ್ರ ಸಹಾಯವಿದೆಯೆಂದು ಇಷ್ಟು ಧೈರ್ಯವೆ ? ಅವನಿಗೆ ಜೀವನಾಂತ್ಯದವರೆಗೂ ಮರೆಯದಂತೆ ಗುಣಪಾಠ ಕಲಿಸದಿದ್ದರೆ ನಾನೇಕೆ ? " ಎಂದು ಗರ್ಜಿಸಿದನು ವೀರಸಿಂಹ.

" ಪ್ರಭೂ ! ನಾನು ಈಗಲೇ ಹೋಗಿ ಆ ವಿಗ್ರಹವನ್ನು ತಂದುಬಿಡುತ್ತೇನೆ. ಅಪ್ಪಣೆಯಾಗಲಿ ! " ಎಂದನು ಸರ್ಪದಂತ.

" ಏಕೆ ? ಮತ್ತೆ ಅದನ್ನು ಮಾಂತ್ರಿಕನ ವಶಕ್ಕೆ ಜಾರಿಸಿ ಬಿಡಲಿಕ್ಕೋ ? ಬೇಡ ! ನಾವೇ ಸ್ವತಃ

ಅನುಭವವಾದುದನ್ನು ಮರೆಯುವಂತಿಲ್ಲವಷ್ಟೆ ? ತಾವೂ ಪ್ರತ್ಯಕ್ಷ ನೋಡಿದ್ದೀರಿ. ಅರಣ್ಯ ಪ್ರಾಣಿಗಳ ಮೇಲೆ ಅತೀತ ಶಕ್ತಿಗಳ ಪ್ರಭಾವವಿಲ್ಲದಿದ್ದರೆ ಮೃಗಗಳು ಹಾಗೆಲ್ಲಾ ತಿರುಗಿ ಬೀಳುವುದುಂಟೆ ? ಎಲ್ಲಾ ಮೃಗಗಳೂ ಹಾಗೆ ಒಗ್ಗಟ್ಟಾಗಿ ಬೀಳುವುದುಂಟೆ ? ಯೋಚನೆ ಮಾಡಬೇಕು ಪ್ರಭುಗಳು " ಎಂದನು.

ಅದಕ್ಕೆ ವೀರಸಿಂಹನು ಕೂಡಲೇ ಉತ್ತರ ಹೇಳಲಾಗದೆ ಸುಮ್ಮನೆ ತಲೆಯಾಡಿಸಿಕೊಂಡನು. ಆದರೆ ಸರ್ಪದಂತನು ತಾನು ಎದೆಗೆಟ್ಟೆನೆಂದುಕೊಳ್ಳುವನೇನೋ ಎಂಬ ಶಂಕೆಯಲ್ಲಿ, " ಇರಲಿರಲಿ ! ಇಷ್ಟಕ್ಕೆಲ್ಲ ಹೆದರುವವನಲ್ಲ ನಾನು. ನಡೆದುದೇನೋ ನಡೆಯಿತಷ್ಟೆ ? ಆ ಬಂಗಾರದ ವಿಗ್ರಹ ಈಗ ಎಲ್ಲಿರುವುದೆಂದು ತಿಳಿದುಕೊಳ್ಳಬೇಡೇನು? ಇಂಥಾ ಅವಮಾನವನ್ನು ತಾಳಿಕೊಂಡು ಎಷ್ಟುಕಾಲ ಸುಮ್ಮನಿರುವುದು ? " ಎಂದು ಹೇಳಿ ಸರ್ಪದಂತನನ್ನು ಕಣ್ಣು ಕೆಕ್ಕರಿಸಿ ನೋಡುತ್ತ, " ಎಲೋ ಸೇನಾಧಿಪತಿ

ಹೋಗುತ್ತೇವೆ. ನೀನೂ ಬಾ. ಸಾಹಸವಂತರಾದ ಕೆಲವು ವೀರರನ್ನು ಆರಿಸಿ ತಯಾರಾಗು. ವಿಗ್ರಹವನ್ನು ಈಸಾರಿ ಸಾಧಿಸಿಕೊಳ್ಳಲೇಬೇಕು. ಮಾಯಾ ಮಂತ್ರಗಳು ಏನು ಮಾಡುತ್ತವೋ ಸ್ವತಃ ನೋಡಿಬಿಡೋಣ. ಹೊರಡು" ಎಂದು ಆಜ್ಞಾಪಿಸಿದನು ವೀರಸಿಂಹ.

* * *

ಜಯಪುರಿಯ ಪ್ರಜೆಗಳೆಲ್ಲರೂ ಆನಂದದ ಉತ್ಸಾಹದಲ್ಲಿ ನಲಿದಾಡಿಕೊಂಡಿದ್ದರು. ಯುವರಾಜ ಸಂದೀಪಕುಮಾರನು ಕನಕದುರ್ಗಾ ದೇವಿಯ ಸುವರ್ಣ ವಿಗ್ರಹವನ್ನು ತಂದು ಒಪ್ಪಿಸಿದ ವಿಷಯವನ್ನು ಶಂಕರವರ್ಮನು ರಹಸ್ಯವಾಗಿಟ್ಟುಕೊಂಡಿದ್ದನು. ಆ ಕಾರಣದಿಂದ ಆ ವಿಗ್ರಹವು ಮತ್ತೆ ತಾನಾಗಿ ಬಂದಿತೆಂದುಕೊಂಡು ಪ್ರಜೆಗಳು ಅದ್ಭುತವೆಂಬಂತೆ ವಿಧವಿಧವಾಗಿ ಮಾತಾಡುತ್ತಿದ್ದರು. ಅದು ನಿಜಕ್ಕೂ ದೈವಿಕ ವಿಗ್ರಹವಾದ್ದರಿಂದಲೇ ತಿರುಗಿ ಬಂತೆಂದುಕೊಂಡಿದ್ದರು. ಆದ್ದರಿಂದ ಹೊಸ ಆಲಯವನ್ನು ಸಿಂಗರಿಸುವುದರಲ್ಲಿ ಮಕ್ಕಳಿಂದ ಮುದುಕರವರೆಗೆ ಎಲ್ಲರೂ ಉತ್ಸಾಹದ ಕೆಲಸದಲ್ಲಿದ್ದರು.

ಯುವರಾಣಿ ಸುಕನ್ಯಾಕುಮಾರಿ ಆ ವಿಗ್ರಹವನ್ನು ಬಿಟ್ಟಿರದೆ ಅದರ ಪಕ್ಕದಲ್ಲೇ ಕುಳಿತಿದ್ದಳು. ತಂಡೋಪತಂಡಗಳಾಗಿ ಬರುವ ಜನರು ಆ ವಿಗ್ರಹವನ್ನೂ ಪಕ್ಕದಲ್ಲೇ ಕುಳಿತಿದ್ದ ಸುಕನ್ಯೆಯನ್ನೂ ನೋಡಿ ಹರ್ಷದಿಂದ ಉಕ್ಕಿಕೊಂಡಿದ್ದರು. ಸುಕನ್ಯೆಯನ್ನೂ, ಕನಕದುರ್ಗಾದೇವಿಯನ್ನೂ ಒಂದೇ ಎಂದು ಹೋಲಿಸಿ ಕುತೂಹಲ ಪಡುತ್ತಿದ್ದರು.

ವಿಗ್ರಹ ಪ್ರತಿಷ್ಠಾಪನೆಗೆ ಜೋಯಿಸ ಪಂಡಿತರು ನಿರ್ಣಯಿಸಿದ ಗಳಿಗೆಗಳು ಬಂದುವು. ಮಂಗಳವಾದ್ಯಗಳು ಮೊಳಗತೊಡಗಿದುವು. ಆಲಯದ ಅರ್ಚಕನೂ, ಶಂಕರವರ್ಮನೂ, ಸುಕನ್ಯೆಯೂ ಬಹಿಶ್ಶುದ್ಧಿ ಅಂತಶ್ಶುದ್ಧಿಗಳಿಂದ ವಿಗ್ರಹವನ್ನು ರಾಜ



ಭವನದೊಳಗಿನಿಂದ ಆಲಯಕ್ಕೆ ಹೊತ್ತುಕೊಂಡು ಹೋಗುತ್ತಿದ್ದರು. ಎಲ್ಲರೂ ಅಂಜಲೀಬದ್ಧರು!

"ನಿಲ್ಲಿಸಿರಿ ಉತ್ಸವ!" ಎಂಬ ಗರ್ಜನಾ ಧ್ವನಿ ಕೇಳಿ ಬಂತು. ಮೇಳತಾಳಗಳ ಶಬ್ದದಲ್ಲಿ ವೀರಸಿಂಹನ ಕೂಗು ಮೊದಲು ಯಾರಿಗೂ ಕೇಳಿಸಲಿಲ್ಲ. ಆದರೆ ಕುದುರೆಗಳ ಮೇಲೆ ಬಂದ ಸೈನಿಕರನ್ನು ನೋಡಿದ ಕೂಡಲೇ, ಮೇಳವಾದ್ಯದವರು ಗಕ್ಕನೆ ನಿಲ್ಲಿಸಿದರು. ಆಗ ಕಿವಿಗಳಿಗೆ ಬಡಿಯಿತು ವೀರಸಿಂಹನ ಘನದರ್ಪ ಗರ್ಜನೆ!

ಮೊದಲು ವೀರಸಿಂಹನೂ, ಅವನ ಹಿಂದೆ ಸರ್ಪದಂತನೂ, ಅಂಗರಕ್ಷಕರೂ ಕುದುರೆಗಳ ಮೇಲೆ ಬಂದುಬಿಟ್ಟಿದ್ದರು.

"ಹೇ ಶಂಕರವರ್ಮಾ, ಯುದ್ಧ ಮಾಡುವುದು ನಿನ್ನ ಅಭಿಮತವಲ್ಲವೆಂದು ಕಾಣುತ್ತದೆ. ಒಂದು ವೇಳೆ ನಿನಗೆ ಯುದ್ಧ ಮಾಡಬೇಕೆಂಬ ಆಶೆಯಿದ್ದರೆ ನಾವು ಸಿದ್ಧರಾಗಿ ಬಂದಿದ್ದೇವೆ" ಎಂದನು ವೀರಸಿಂಹ.



Scanned by CamScanner



"ಯುದ್ಧಕ್ಕೆ ನಾನು ಸಿದ್ಧನಾಗಿಲ್ಲ. ನಿಮ್ಮ ಹತ್ತಿರ ಮಾತ್ರವಲ್ಲ. ಯಾರೊಂದಿಗೂ ಯುದ್ಧ ಮಾಡುವ ಶಕ್ತಿ ನಮಗಿಲ್ಲವೆಂದು ನಿನಗೇ ಗೊತ್ತಿದೆ. ನಮ್ಮನ್ನು ಪ್ರಶಾಂತವಾಗಿ ಬದುಕಲು ಬಿಡಬೇಕೆಂದು ಕೇಳಿಕೊಳ್ಳುತ್ತೇನೆ" ಎಂದನು ಶಂಕರವರ್ಮ.

"ಈಗ ನೀವು ಬಂಗಾರದ ಕನಕದುರ್ಗಾ ವಿಗ್ರಹವನ್ನು ನಮಗೆ ಒಪ್ಪಿಸಿಬಿಟ್ಟರೆ, ನಾವು ನಿಮ್ಮ ಶಾಂತಿಗೆ ಯಾವ ಹಾನಿಯನ್ನೂ ಮಾಡುವುದಿಲ್ಲ" ಎಂದನು ವೀರಸಿಂಹ.

"ಅದು ಮಾತ್ರ ನನ್ನಿಂದಾಗದು!" ಎಂದಳು ಶಂಕರವರ್ಮನ ಕುಮಾರಿ ಸುಕನ್ಯೆ ಗಟ್ಟಿಯಾದ ತೀಕ್ಷ್ಣ ಧ್ವನಿಯಿಂದ!

ವೀರಸಿಂಹನು ಅವಳ ಕಡೆಗೆ ಆಶ್ಚರ್ಯದಿಂದ ನೋಡಿದನು. ಸುಕನ್ಯೆ ವಿಗ್ರಹವನ್ನು ಬಿಗಿಯಾಗಿ ಆಲಿಂಗಿಸಿಕೊಂಡಿದ್ದಳು. "ಯಾರವಳು?" ಎಂದು ಕೇಳಿದನು ವೀರಸಿಂಹ.

"ನನ್ನ ಏಕೈಕ ಕುಮಾರಿ ಸುಕನ್ಯೆ. ಅವಳಿಗೆ ವಿಗ್ರಹದ ಮೇಲೆ ಅತ್ಯಂತ ಪ್ರೇಮ" ಎಂದನು ಶಂಕರವರ್ಮ.

"ಹುಂ! ವಿಗ್ರಹದ ಮೇಲೆ ಪ್ರೇಮ! ಅರ್ಥವಿಲ್ಲದ ಪ್ರಲಾಪ!" ಎನ್ನುತ್ತ ವೀರಸಿಂಹನು ಕುದುರೆಯಿಂದಿಳಿದು, ಶಂಕರವರ್ಮನ ಬಳಿಗೆ ಬಂದು ಮುಗುಳು ನಗುತ್ತ "ನನಗೆ ಸುಕನ್ಯೆಯ ಮೇಲೆ ಪ್ರೇಮ!" ಎಂದನು.

"ಏನು ಹೇಳುವಿ ನೀನು?" ಕಣ್ಣರಳಿಸಿ ಕೇಳಿದನು ಶಂಕರವರ್ಮ.

"ಇದು ಅಸಂಬದ್ಧ ಪ್ರಲಾಪವಲ್ಲ. ಅರ್ಥವಿರುವ ಪ್ರೇಮವಯ್ಯಾ. ಬಂಗಾರದ ವಿಗ್ರಹವು ನನಗೆ ಬೇಡ. ನಿಮಗೇ ಇರಲಿ!" ಎಂದನು ವೀರವರ್ಮ.

"ಬಹಳ ಸಂತೋಷ. ಧನ್ಯವಾದಗಳು!" ಎಂದನು ಶಂಕರವರ್ಮ.

"ಹಾಗಾದರೆ ನಿಮ್ಮ ಈ ಕುಮಾರಿಯನ್ನು ನನಗೆ ಕೊಡಲು ಸಿದ್ಧತೆ ನಡೆಸಿರಿ. ವಿಗ್ರಹಕ್ಕೆ ಬದಲು ಸುಕನ್ಯೆಯನ್ನು ವಿವಾಹ ಮಾಡಿಕೊಂಡು ಹೋಗಿ ಇವಳನ್ನು ಸುಮೇಧದ ಪಟ್ಟದ ರಾಣಿಯಾಗಿ ಮಾಡುತ್ತೇನೆ. ಈ ಸುಕುಮಾರಿಗೆ ಶಾಂತಿಪುರದ ರಾಜಸೌಧದಲ್ಲಿ ಸರ್ವ ಸುಖಗಳೂ ಕೈಗೂಡುವ ಹಾಗೆ ಮಾಡುತ್ತೇನೆ" ಎಂದನು ವೀರಸಿಂಹ ವಿಕಾರದ ನಗೆಯೊಂದಿಗೆ.

"ವೀರಸಿಂಹಾ!" ಎಂದು ಗರ್ಜಿಸಿದನು ಶಂಕರವರ್ಮ.

"ಏಕೆ ವೃಥಾ ಕೂಗುವಿಯೋ! ನೀನು ನಮ್ಮ ಸಾಮಾನ್ಯ ಸಾಮಂತ ಮಾತ್ರ! ಮಹಾಪ್ರಭುಗಳಾದ ನಮ್ಮನ್ನು ಗೌರವದಿಂದ ಸಂಬೋಧಿಸಲೂ ತಿಳಿಯದೇನು? ಎಚ್ಚರಿಕೆ! ನಿಮ್ಮ ಶ್ರೇಯಸ್ಸಿಗೆ ಹಾನಿ ತಂದುಕೊಳ್ಳಬೇಡಿ!" ಎಂದು ಎಚ್ಚರಿಸುವಂತೆ ವೀರಸಿಂಹನೆಂದನು.

"ದೌರ್ಜನ್ಯಕ್ಕಾದರೂ ಒಂದು ಹದ್ದಿದೆ. ನೀನು ಅದನ್ನು ಮೀರುವಿ!" ಎಂದನು ಶಂಕರವರ್ಮ.

"ದೌರ್ಜನ್ಯವೇ? ಯಾವುದು ದೌರ್ಜನ್ಯ? ಮಹಾಪ್ರಭುಗಳು ಒಬ್ಬ ಸಾಮಂತನ ಮಗಳನ್ನು ಮದುವೆಯಾಗಲು ಬಯಸುವುದು ದೌರ್ಜನ್ಯವೇನು? ಶಂಕರವರ್ಮ. ನೀನು ಪ್ರಾಣಪ್ರದವಾಗಿ ಭಾವಿಸುವ ಬಂಗಾರದ ವಿಗ್ರಹವೂ, ಅದಕ್ಕಾಗಿ ಕಟ್ಟಿಸಿದ ಗುಬ್ಬಿ ಗೂಡಿನಂಥ ಗುಡಿಯೂ, ನಿನ್ನ ಸಣ್ಣ ಕೊಟ್ಟಿಗೆಯಂಥ ರಾಜ್ಯವೂ ಹೇಗಿವೆಯೋ ನೆನೆದು ನೋಡು" ಎಂದನು ವೀರಸಿಂಹ.

"ವೀರಸಿಂಹಾ! ವ್ಯರ್ಥ ಪ್ರಲಾಪ ಬೇಡ. ನಮ್ಮ ಆತ್ಮಗೌರವ ಕಾಪಾಡಿಕೊಳ್ಳಲಿಕ್ಕೆ ಸ್ವರ್ವಸ್ವವನ್ನೂ ತ್ಯಜಿಸಲು ಸಿದ್ಧನಾಗಿದ್ದೇನೆ" ಎಂದನು ಶಂಕರವರ್ಮ.

"ಏನಯ್ಯಾ, ಬುದ್ಧಿ ಕೆಟ್ಟವನ ಹಾಗೆ ಬೊಗಳುವಿ? ಮಹಾರಾಜನೊಬ್ಬನು ನಿನ್ನಂಥಾ ಅಲ್ಪನ ಮಗಳನ್ನು ಮದುವೆಯಾಗಿ ಗೌರವಸ್ಥಾನ ಕೊಡುತ್ತಾನೆಂದರೆ ವ್ಯರ್ಥ ಪ್ರಲಾಪವೆನ್ನುವಿಯಾ? ಒಳ್ಳೆಯ ಮಾತಿನಲ್ಲಿ ಹೇಳುತ್ತೇನೆ. ನಿಮ್ಮ ಕುಮಾರಿಯನ್ನು ನನಗೆ ಕೊಟ್ಟು ವಿವಾಹ ಮಾಡಿದರೆ ವಿಗ್ರಹವು ನಿಮ್ಮದಾಗುತ್ತದೆ. ಇಲ್ಲದಿದ್ದರೆ ವಿಗ್ರಹವೂ ದಕ್ಕದು, ಮಗಳೂ ದಕ್ಕಲಾರಳು. ಅಷ್ಟೇ ಅಲ್ಲ, ನಿನ್ನ ರಾಜ್ಯ ಕೂಡಾ ನನ್ನದಾಗುತ್ತದೆ. ಒಂದುವೇಳೆ ಇದಿರಿಸಿ ಹೋರಾಡಿದರೆ ರಕ್ತಪಾತವೂ, ಪರಾಜಯವೂ ನಿಮ್ಮ ಕಟ್ಟಿಟ್ಟ ಗಂಟು!" ಎಂದನು ವೀರಸಿಂಹ ಕಟ್ಟ ಕಡೆಯ ಎಚ್ಚರಿಕೆಯಾಗಿ.

"ಅಪ್ಪಾ, ಇವನ ಕೋರಿಕೆಯನ್ನು ಮನ್ನಿಸಿರಿ. ಈ ವಿಗ್ರಹವು ನಿಮ್ಮ ಹತ್ತಿರವೇ ಇರುವ ಹಾಗಾದರೆ ನಾನು ಆತನೊಂದಿಗೆ ಹೋಗಲು ಸಿದ್ಧಳಾಗಿದ್ದೇನೆ!" ಎಂದಳು ಸುಕನ್ಯೆ.

"ಏನು ಹೇಳುವಿಯಮ್ಮಾ? ಎಚ್ಚರಿಕೆಯಲ್ಲಿದ್ದೇ ಹೇಳುವಿಯಾ?" ಎಂದನು ಶಂಕರವರ್ಮ.



"ಶಭಾಸ್! ಸುಕನ್ಯೆ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡೇ ಹಾಗೆ ಹೇಳುತ್ತಾಳೆ! ನನ್ನಂಥವನ ಮೇಲೆ ಯಾವ ಕನ್ಯೆಗೆ ಪ್ರೇಮ ಉಕ್ಕದು! ಅವಳ ಏಕವಚನವೇ ಸವಿಸಾಕ್ಷಿ!" ಎಂದನು ವೀರಸಿಂಹ ನಗುತ್ತಾ.

"ಅದೆಂಥ ಪರಿಸ್ಥಿತಿ ಬಂತೀಗ?" ಎಂದನು ಶಂಕರವರ್ಮ ವೀರಸಿಂಹನನ್ನು ಕೋಪದಿಂದ ನೋಡುತ್ತ.

ಆಗಲೇ ವ್ಯಾಪಾರಿಯಂತಹ ಯುವಕನೊಬ್ಬನು ಸುಕನ್ಯೆಯ ಬಳಿಗೆ ಬಂದು ಕೈಯಲ್ಲಿದ್ದುದೇನನ್ನೋ ಅವಳಿಗೆ ಕೊಡುವವನಂತೆ ನಟಿಸುತ್ತ "ಈ ಶುಭ ಪರಿಸ್ಥಿತಿಗಾಗಿಯೇ ಕಾದಿದ್ದೆ!" ಎಂದು ಅವಳ ಕಿವಿಯಲ್ಲೇನೋ ಉಸುರಿ, ಶಂಕರವರ್ಮನನ್ನು ನೋಡಿದನು. ವ್ಯಾಪಾರಿಯ ವೇಷದಲ್ಲಿ ಬಂದವನು ಯುವರಾಜ ಸಂದೀಪನೆಂದು ಶಂಕರವರ್ಮನಿಗೆ ತಿಳಿದು ಕಣ್ಣುಗಳು ಆನಂದದಲ್ಲಿ ಹೊಳೆದುವು.



"ಆಗಲಿ, ವಿಲಕ್ಷಣ ವಿಧಿಲೀಲೆ!" ಎಂದು ತಲೆದೂಗಿ ಗೊಣಗಿದನು ಶಂಕರವರ್ಮ.

ಕೂಡಲೇ ಸುಕನ್ಯೆಯನ್ನು ವೀರಸಿಂಹನೊಂದಿಗೆ ಕಳುಹಿಸುವ ಸನ್ನಾಹಗಳು ಪ್ರಾರಂಭವಾದುವು. ಸುಂದರವಾಗಿ ಅಲಂಕರಿಸಿದ ಆನೆಯನ್ನು ತಂದು, ಸುಕನ್ಯೆಯನ್ನು ಮದುಮಗಳ ಹಾಗೆ ಸಿಂಗರಿಸಿ, ಅವಳ ಮುಖ್ಯ ಗೆಳತಿಯರೊಂದಿಗೆ ಆನೆಯ ಅಂಬಾರಿಯಲ್ಲಿ ಕೂಡಿಸಿದರು. ಆನೆಯ ಮುಂದೆ ವೀರಸಿಂಹನೂ ಸರ್ಪದಂತನೂ ಸಾಗುತ್ತಿರಲು, ಅವರ ಹಿಂದೆ ಸೈನಿಕರೂ ಹೊರಟರು. "ಶುಭ ಮುಹೂರ್ತ ನಿಶ್ಚಯಿಸಿ ಸುದ್ದಿ ಕಳಿಸುತ್ತೇವೆ. ನೀವೂ ಬನ್ನಿ ಶಂಕರವರ್ಮ ಮಾವಯ್ಯಾ" ಎಂದು ಗಟ್ಟಿಯಾಗಿ ಹೇಳಿದನು ವೀರಸಿಂಹ.

ಹೀಗೆ ಅವರೆಲ್ಲಾ ಅರಣ್ಯವನ್ನು ಸಮೀಪಿಸುತ್ತಿರುವಾಗ ಜಯಾನಂದ ಮುನಿಯ ಮಲ್ಲೀಗಿಳಿ ಹಾರುತ್ತಾ ಬಂದು ಒಂದು ಪತ್ರವನ್ನು ಸುಕನ್ಯೆಯ ಮಡಿಲಲ್ಲಿ ಜಾರಬಿಟ್ಟು ಹಾರಿಹೋಯಿತು. ಅದನ್ನು ಯಾರೂ ಗಮನಿಸಲಿಲ್ಲ. ಸುಕನ್ಯೆ ಆ ಪತ್ರವನ್ನು ಓದಿ ಗೆಳತಿಯ ಕಿವಿಯಲ್ಲಿ ಏನೋ ಹೇಳಿ, ಕಣ್ಣುಮುಚ್ಚಿ ಸ್ಮೃಹೆ ತಪ್ಪಿದವಳಂತೆ ಅವಳ ಮಡಿಲಲ್ಲಿ ಬಿದ್ದಳು.

"ನಿಲ್ಲಿಸಿರಿ! ನಿಲ್ಲಿಸಿರಿ!" ಎಂದು ಕೂಗಿದಳು ಆ ಗೆಳತಿ.

ಎಲ್ಲರೂ ಅಲ್ಲಲ್ಲೇ ನಿಂತರು.

"ಯುವರಾಣಿಗೆ ಮೂರ್ಛೆ ಬಂದು ಬಿದ್ದರು. ಕೆಳಗಿಳಿಸಿ ಬೇಗನೇ ವೈದ್ಯರನ್ನು ಕರೆದು ತನ್ನಿರಿ!" ಎಂದಳು ಗೆಳತಿ ಗಾಬರಿಯಿಂದ.

ಕೂಡಲೇ ಸುಕನ್ಯೆಯನ್ನು ಅಂಬಾರಿಯಿಂದ ಕೆಳಗಿಳಿಸಲಾಯಿತು. ವೀರಸಿಂಹನ ಆಜ್ಞೆಯಿಂದ ಸಮೀಪದಲ್ಲೊಂದು ಗುಡಾರವನ್ನು ಏರ್ಪಡಿಸಿದರು. ಒಬ್ಬ ಭಟನು ಜಯಪುರಿಗೆ ಓಡಿಹೋಗಿ ಆಸ್ಥಾನ ವೈದ್ಯನನ್ನೂ, ಇಬ್ಬರು ಯುವಕರನ್ನೂ ಕರೆದು

ಶಂಕರವರ್ಮನು ಮಗಳನ್ನು ನೋಡಿ, "ಮಗಳೇ, ನೀನು ಆ ಮಾತನ್ನು ಮನಃಪೂರ್ವಕವಾಗಿ ಹೇಳುವಿಯಾ?" ಎಂದು ಕೇಳಿದನು.

"ಹೌದಪ್ಪಾ, ಹೌದು. ನಿಮಗೆ ಎಂತಹ ಅನುಮಾನವೂ ಬೇಡ. ಏಕೆಂದರೆ ನನಗೆ ಬೇಕಾದ್ದೆಲ್ಲಾ ಈ ಅಪೂರ್ವ ವಿಗ್ರಹ ನಿಮ್ಮ ಹತ್ತಿರ ಇರಬೇಕೆಂಬುದೇ. ಅಲ್ಲದೆ ನನ್ನಿಂದಾಗಿ ರಕ್ತಪಾತವಾಗುವುದು ನನಗೆ ಎಷ್ಟು ಮಾತ್ರಕ್ಕೂ ಇಷ್ಟವಿಲ್ಲ. ಅದೂ ಅಲ್ಲದೆ ನಾವು ಎಷ್ಟೇ ಅಲ್ಲಗಳೆದರೂ ಮಹಾರಾಜರು ಬಿಡಲಾರರು. ಹೇಗಿದ್ದರೂ ನಾನು ಇನ್ನೊಬ್ಬರಲ್ಲಿಗೆ ಹೋಗಬೇಕಾದವಳೇ ತಾನೇ? ಅಲ್ಲದೆ ಪ್ರಾಯ ಹೊಂದದಿದ್ದರೂ, ಒಳ್ಳೆಯ ಯುವಕನಂತಿರುವ ಈ ಮಹಾ ಯುವಕ ಪ್ರಭುಗಳನ್ನು ಮದುವೆಯಾಗುವುದರಲ್ಲಿ ತಪ್ಪೇನಿದೆ?" ಎಂದಳು ಸುಕನ್ಯೆ.

"ಶಹಭಾಸ್! ಯುವರಾಣೀ! ಬಹಳ ಚೆನ್ನಾಗಿ ಹೇಳಿದಿ!" ಎಂದನು ವೀರಸಿಂಹ ಆನಂದದಿಂದ.



Scanned by CamScanner

ಕೊಂಡು ಬಂದನು. ಅವರು ಮೂವರೂ ಸುಕನ್ಯೆ ಮಲಗಿರುವ ಗೂಡಾರದೊಳಗೆ ಹೋಗಿ, ಸ್ವಲ್ಪ ಹೊತ್ತಿಗೆ ಹೊರಗೆ ಬಂದರು. ವೀರಸಿಂಹನೊಂದಿಗೆ ವೈದ್ಯನು "ಯುವರಾಣಿ ಇನ್ನು ಸ್ವಲ್ಪ ಹೊತ್ತಿಗೆ ಚೇತರಿಸಿಕೊಳ್ಳುತ್ತಾರೆ. ಯಾಕೋ ತುಂಬಾ ದಣಿದಿದ್ದಾರೆ. ಸ್ವಲ್ಪ ವಿಶ್ರಾಂತಿ ಬೇಕು ಅಷ್ಟೇ. ಈ ಸಮಯದಲ್ಲಿ ಆನೆಯ ಮೇಲೆ ಪ್ರಯಾಣ ಒಳ್ಳೆಯದಲ್ಲ. ಮೇನಾದಲ್ಲಿ ಪ್ರಯಾಣ ಮಾಡಬಹುದು" ಎಂದು ಸಲಹೆ ಹೇಳಿ ಹೊರಟುಹೋದನು.

ಜಯಪುರಿಯಿಂದ ಮೇನಾ ತರಿಸಲು ಸಾಯಂಕಾಲವಾಯಿತು. ವೀರಸಿಂಹನು ಸುಕನ್ಯೆಯ ಗೆಳತಿಯನ್ನು ಕರೆದು, "ಈಗ ಯುವರಾಣಿ ಪ್ರಯಾಣಕ್ಕೆ ಸಿದ್ಧಳೇನಾ ?" ಎಂದು ಕೇಳಿದನು.

"ಪ್ರಭೂ, ಯುವರಾಣಿಯವರು ವಿಶ್ರಾಂತಿಯಲ್ಲಿದ್ದಾರೆ. ತಾವೇ ಒಳಗೆ ಹೋಗಿ ಪರಾಂಬರಿಸಬಹುದಲ್ಲ!" ಎಂದಳು ನಸುನಗುತ್ತ.

ವೀರಸಿಂಹನು, "ಹೌದು ಪಾಪ! ತುಂಬಾ ಮೃದುಮೈಯವಳು. ಇವತ್ತು ವಿಗ್ರಹದ ಗುಂಗಿನಲ್ಲಿ ಎಷ್ಟು ಕೆಲಸ ಮಾಡಿ ದಣಿದಳೋ!" ಎಂದುಕೊಳ್ಳುತ್ತಾ ಅತ್ಯಾನಂದದಿಂದ ಒಳಗೆ ಹೋದನು. ನಿಶ್ಶಬ್ದವಿದ್ದ ಗುಡಾರದೊಳಗೆ ಸಣ್ಣ ದನಿಯಲ್ಲಿ ಗಂಟಲು ಕೆನೆಯುತ್ತ ಮೆಲ್ಲಗೆ ಹತ್ತಿರ ಹೋದನು. "ಪ್ರಿಯ ಯುವರಾಣೀ!" ಎಂದು ಮೆಲ್ಲಗೆ ಕರೆದನು. ಮಂದವಾದ ಬೆಳಕಿನಲ್ಲಿ ಹಾಸಿಗೆಯಲ್ಲಿ ಮಲಗಿದವಳನ್ನು ಸಮೀಪಿಸಿದನು. ಅವಳ ಪಟ್ಟೇವಸ್ತ್ರವು ತಳಕ್ಕನೆ ಹೊಳೆಯಿತು. ಅದು ಸುಕನ್ಯೆಯ ಕೈ ಎಂದುಕೊಂಡು ಅದನ್ನು ಪ್ರೇಮದಿಂದ ಸ್ಪರ್ಶಿಸಿ "ಯುವರಾಣೀ" ಎಂದನು ಪುನಃ.

ಮರುಕ್ಷಣವೇ ಪಟ್ಟೇವಸ್ತ್ರವನ್ನು ಆಚೆಗೆ ಹಾರಿಸಿ ಒಂದು ಕೋತಿ ವೀರಸಿಂಹನ ಮುಖವನ್ನು ಉಗುರುಗಳಿಂದ ಗೀರಿ ಗಾಯಪಡಿಸಿ, ಹಾರಿ ಗೂಡಾರದೊಳಗಿನಿಂದ ಹೊರಗೆ ಓಡಿಹೋಗಿಬಿಟ್ಟಿತು!

ವೀರಸಿಂಹನು ಒಮ್ಮೆಗೇ ಅವಾಕ್ಕಾಗಿ ಹೋದನು. ಆಶಾಭಂಗದಿಂದಲೂ, ಅವಮಾನದಿಂದಲೂ ಸ್ವಲ್ಪ ಹೊತ್ತು ಅಲ್ಲಿಂದ ಕದಲಲಾಗದೆ ಹೋದನು. ಇಷ್ಟರೊಳಗೆ ಇಲ್ಲಿಗೆ ಕೋತಿ ಹೇಗೆ ಬಂತು? ಮತ್ತೆ ಮಂತ್ರ ಪ್ರಯೋಗವೇ? ಮಾಯಾ ಮಂತ್ರದಿಂದ ಯುವರಾಣಿಯನ್ನು ಕೋತಿಯಾಗಿ ಮಾರ್ಪಡಿಸಿದರೇ? ಒಂದುವೇಳೆ ಹಾಗಾಗಿದ್ದರೆ ಮತ್ತೆ ಆ ಕೋತಿಯನ್ನು ಯುವರಾಣಿಯಾಗಿ ಮಾರ್ಪಡಿಸಲೂ ಸಾಧ್ಯವಷ್ಟೆ? ಹೀಗೆಂದುಕೊಳ್ಳುತ್ತಾ ವೀರಸಿಂಹನು "ಹಿಡೀರಿ! ಹಿಡೀರಿ! ಆ ಕೋತಿಯನ್ನು ಹಿಡೀರಿ!" ಎಂದು ಕೂಗುತ್ತಾ ಗೂಡಾರದೊಳಗಿನಿಂದ ಹೊರಗೆ ಓಡಿಬಂದನು. —(ಇನ್ನೂ ಇದೆ)






## ೧೭

[ ವೀರಸಿಂಹನು ಶಾಂತಿಪುರಕ್ಕೆ ಹೋಗುವ ಮಾರ್ಗದಲ್ಲಿ ಸುಕನ್ಯೆ ಸ್ಮೃಹೆತಪ್ಪಿ ಬಿದ್ದಹಾಗಾದಳು. ಕೂಡಲೇ ಗುಡಾರ ಹಾಕಿಸಿ ವಿಶ್ರಾಂತಿಗೆ ಏರ್ಪಾಟು ಮಾಡಿಸಿದನು. ಸಾಯಂಕಾಲ ವೀರಸಿಂಹನು ಸುಕನ್ಯೆಯನ್ನು ಮಾತಾಡಿಸಲು ಸ್ವತಃ ಗೂಡಾರದೊಳಗೆ ಪ್ರವೇಶಿಸಿದನು. ಯುವರಾಣಿಯ ಸ್ಥಾನದಲ್ಲಿದ್ದ ಒಂದು ಕೋತಿ ಅವನ ಮುಖವನ್ನು ಪರಚಿ ಓಡಿಬಿಟ್ಟಿತು. ಅದು ಮಂತ್ರಪ್ರಭಾವವೆಂಬ ಸಂದೇಹ ಬಂತು ಅವನಿಗೆ. — ಆಮೇಲೆ ]

"ಹಿಡಿಯಿರೋ ! ಆ ಕೋತೀನ ಹಿಡಿಯಿರೋ ! ಮಾಯಾ ಮಂತ್ರಜಾಲ ಹಾಕಿದರಲ್ಲೊ !" ಎಂದು ಕೂಗುತ್ತ, ಗೂಡಾರದೊಳಗಿನಿಂದ ಹೊರಗೆ ಬಂದ ವೀರಸಿಂಹನು ಅತ್ಯಾಕ್ರೋಶದಿಂದ ಗಂಟಲು ಹರಿಯುವಂತೆ ಕೂಗುತ್ತಿರುವುದನ್ನು ನೋಡಿ, ಸೈನಿಕರು ತಬ್ಬಿಬ್ಬಾಗಿ ಹಾರಿಬಿದ್ದು ಆಚೀಚೆ ನೋಡಿದರು. ಈ ಮೊದಲಿನ ಅನುಮಾನದ ಅನುಭವದಂತೆ ಯಾವ ಮಾಂತ್ರಿಕನೋ ಮಾಯಾಜಾಲ ತೋರಿಸಿ ಸುಕನ್ಯೆಯನ್ನು ಕೋತಿಯಾಗಿ ಮಾರ್ಪಡಿಸಿ ಒಯ್ದಿರುವನೆಂದೇ ಅವನಿಗೆ ತೋರಿತು. ಈ ಮೊದಲು ಗೂಡಾರದೊಳಗೆ ಹೋಗಿ ಹೊರಗೆ ಬಂದ ವೈದ್ಯನ ಜತೆಯಲ್ಲಿ ಯುವರಾಣಿ ಮಾರುವೇಷದಲ್ಲಿ ಹೊರಗೆ ಹೋದಳೆಂದೂ, ಆ ವೈದ್ಯನೇ ತನ್ನೊಂದಿಗೆ ಇಟ್ಟು ಕೊಂಡಿದ್ದ ದೊಡ್ಡ ಚೀಲದೊಳಗೆ ಆ ಸಾಕು ಕೋತಿಯನ್ನು ಹಾಸಿಗೆಯಲ್ಲಿ ಮಲಗಿಸಿರಬೇಕೆಂದೂ ಅವನು ಊಹಿಸಲಾಗದೆ ಹೋದನು. ಮಾಯಾಜಾಲ ಬೀಸಿದ ಶಂಕರವರ್ಮನ ಮೇಲೆ ಬಹಳ ಸಿಟ್ಟು ಕೂಡಾ ಬಂತು.

ವೀರಸಿಂಹನ ಕೂಗಾಟ ಸರ್ಪದಂತನನ್ನು ಕೂಡಾ ಆಶ್ಚರ್ಯಪಡಿಸಿತು. ವೀರಸಿಂಹನಿಗೆ ಮಾಯಾ



Scanned by CamScanner



ಜಾಲದ ಮೇಲೂ, ಮಂತ್ರತಂತ್ರಗಳ ಮೇಲೂ ನಂಬುಗೆ ಇಲ್ಲವೆಂದು ಅವನಿಗೆ ಗೊತ್ತು. ಆದರೆ ಮಂತ್ರಪ್ರಭಾವದಿಂದಲೇ ಹೀಗೆಲ್ಲಾ ಆಯಿತೆಂದು ವೀರಸಿಂಹನಿಗೆ ಅದರ ಮೇಲೆ ನಂಬುಗೆಯ ಭಾವನೆ ಬರುವಂತೆ ಮಾಡಿದವನೇ ಸರ್ಪದಂತನು. ಸುವರ್ಣದ ಕನಕದುರ್ಗಾ ವಿಗ್ರಹವನ್ನು ರಕ್ಷಿಸಲಾಗದ ತನ್ನ ಅಸಮರ್ಥತೆಯನ್ನು ಮುಚ್ಚಿಕೊಳ್ಳಲಿಕ್ಕೇ ಅವನು ಆ ಬಗೆಯ ಕಟ್ಟುಕಥೆ ಹೇಳಬೇಕಾಗಿ ಬಂದದ್ದು. ಈಗ ವೀರಸಿಂಹ ಆ ನಂಬುಗೆಯಲ್ಲಿದ್ದಾನೆ. ಆದರೆ ಯುವ ರಾಣಿ ಗೂಡಾರದೊಳಗೆ ಕಾಣದೆ ಹೋಗಲು ಮನುಷ್ಯರ ತಂತ್ರವೇ ಕಾರಣವಲ್ಲದೆ, ಮಾಂತ್ರಿಕರ ಮಾಯಾಜಾಲವಲ್ಲವೆಂದು, ಸರ್ಪದಂತನಿಗೆ ಗೊತ್ತಿತ್ತು. ಆದರೂ ವೀರಸಿಂಹನ ಮಂದಭ್ರಾಂತಿಯನ್ನು ಹೋಗಲಾಡಿಸಿಬಿಟ್ಟರೆ ತನ್ನ ಸುಳ್ಳು ಹೊರಗೆ ಬೀಳುತ್ತದೆಂದು ಸರ್ಪದಂತನಿಗೆ ಭಯವಾಯಿತು. ಆದಕ್ಕೇ ಗಾಳಿಯೂದಬೇಕಾಯಿತು.

ಆದುದರಿಂದ ಅವನು ವೀರಸಿಂಹನನ್ನು ನೋಡಿ, "ಮಹಾಪ್ರಭೂ, ನಮಗೀಗ ಯಾವ ಮಾಂತ್ರಿಕನೋ ಸಹಾಯಕ್ಕೆ ಬಂದರೆ ಹೊರತು ಇಂತಹ ಮಂತ್ರ ಪ್ರಭಾವದೊಳಗಿನಿಂದ ನಾವು ಹೊರಬೀಳಲು ಸಾಧ್ಯವಿಲ್ಲ! ದೇಶದಲ್ಲಿ ಅನೇಕ ಮಂತ್ರವಾದಿಗಳಿದ್ದಾರೆ. ಅಂಥವರಲ್ಲಿ..." ಎಂದನು.

"ಹೌದೋ ಹೌದು! ಸುಮ್ಮನೆ ಮಾತಿನಲ್ಲಿ ಹೊತ್ತು ಕಳೆಯಬೇಡ. ಕೋತಿಯನ್ನು ಯುವ ರಾಣಿಯನ್ನಾಗಿಸಿ ಬದಲಾಯಿಸಬಲ್ಲ ಮಂತ್ರವಾದಿ ಯಾರಾದರೂ ನಿನಗೆ ಗೊತ್ತೆ? ಬೇಗ ಹೇಳು. ಅದಕ್ಕೆ ಎಷ್ಟು ಧನ ಖರ್ಚು ಮಾಡಲಿಕ್ಕೂ ನಾವು ಸಿದ್ಧರಾಗಿದ್ದೇವೆ!" ಎಂದನು ವೀರಸಿಂಹ.

"ತಮ್ಮ ಆಲೋಚನೆ ಅದ್ಭುತವಾಗಿದೆ ಪ್ರಭುಗಳೇ! ಯಾವುದಕ್ಕೂ ಮೊದಲು ನಾವು ಕೋತಿಯಾಗಿ ಓಡಿದ ಯುವರಾಣಿಯನ್ನು ಹಿಡಿಯಬೇಕು. ಅನೇಕ ಕೋತಿಗಳೆಡೆಯಲ್ಲಿ ಅದನ್ನು ಕಂಡುಹಿಡಿಯುವುದು ಹೇಗೆಂಬುದೇ ದೊಡ್ಡ ಸಮಸ್ಯೆ" ಎಂದನು ಸರ್ಪದಂತ.

ವೀರಸಿಂಹನು ಏನೋ ಹೇಳಲಿರುವಷ್ಟರಲ್ಲಿ ಒಂದು ಗಿಳಿ ಅವನ ತಲೆಯ ಮೇಲ್ಭಾಗದಲ್ಲಿ ಹಾರಿ ಬಂದುದು ಕಂಡಿತು. ಆತನು ಮೇಲೆ ನೋಡಿದ ಕೂಡಲೆ ಒಂದು ಕೊಳವೆಯಂತಹುದನ್ನು ಅವನ ಮೇಲೆ ಜಾರುವಂತೆ ಬಿಟ್ಟು ಹಾರಿಹೋಯಿತು ಆ ಗಿಳಿ. ಗುರಿಯಿಟ್ಟ ಹಾಗೆ ಅದು ತನ್ನ ಕಡೆಗೇ ಬಂದು ಹೀಗೆ ಹಾಕಬೇಕಾದರೆ ಮತ್ತೇನು ಮಂತ್ರಜಾಲವೋ?

ಅದು ಕೊಳವೆಯಂತೆ ಸುತ್ತಿದ ವಕ್ರವಾಗಿತ್ತು. ಸರ್ಪದಂತನು ನೆಲಕ್ಕೆ ಬಿದ್ದ ಅದನ್ನೆತ್ತಿ ವೀರಸಿಂಹನ ಕೈಗೆ ಕೊಟ್ಟನು.

ವೀರಸಿಂಹನು ದೀವಿಟಿದೊಂದಿಯ ಬೆಳಕಿನಲ್ಲಿ ಅದರೊಳಗಿರುವುದನ್ನು ಓದಿದನು. "ವೀರಸಿಂಹಾ!



Scanned by CamScanner

ನೀಚವಾದ ನಿನ್ನ ವಾಂಛೆಯಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಯುವರಾಣಿ ಸುಕನ್ಯೆ ಕೋತಿಯಾಗಿ ಮಾರ್ಪಟ್ಟಿದ್ದಾಳೆ! ನಿನಗೆ ಸ್ವಲ್ಪ ಕೂಡಾ ನಾಚಿಕೆ ಎಂಬುವದರ ಗಂಧವೂ ಇಲ್ಲವೆ? ಇನ್ನೂ ನಿನ್ನ ಮಿದುಳಿನ ಮೂಲೆಯಲ್ಲಿ ವಿವೇಕದ ಚೂರೇನಾದರೂ ಇದ್ದರೆ ಮಾತಾಡದೆ ಶಾಂತಿಪುರಕ್ಕೆ ಹೋಗಿಬಿಡು. ಶಂಕರವರ್ಮನಿಗಾಗಲಿ, ಜಯಪುರಿಯ ಪ್ರಜೆಗಳಿಗಾಗಲೀ ಹಾನಿಮಾಡಲು ತಲೆಹಾಕಿದರೆ ನಿನ್ನ ಪ್ರಾಣ ಉಳಿಯದು. ಜಾಗ್ರತೆ! ಇದು ಯುವರಾಜ ಸಂದೀಪನ ಆಜ್ಞೆ!"



"ಹಂ! ಯುವರಾಜ ಸಂದೀಪ! ಯಾರು ಈ ಯುವರಾಜಾ! ನನಗೇ ಆಜ್ಞೆ ಮಾಡುವಷ್ಟು ಸೊಕ್ಕಿದ ಯಾವ ಮಾಯಾವಿ ಇವನು!" ಎಂದು ಕಿರಿಚಿದನು ವೀರಸಿಂಹ ಹಲ್ಲು ಕಡಿಯುತ್ತ.

ಈ ಮೊದಲು ಕೂಡಾ ಸರ್ಪದಂತನಿಗೆ ಅಂತಹ ಎಚ್ಚರಿಕೆ ಬಂದಿದ್ದರೂ, ಅವನು ಆ ವಿಷಯವನ್ನು ವೀರಸಿಂಹನೊಂದಿಗೆ ಹೇಳಿರಲಿಲ್ಲ. ಏಕೆಂದರೆ, ಅದು ಅವನು ವೀರಸಿಂಹನನ್ನು ಭ್ರಾಂತಿಗೀಡು ಮಾಡಿದ ಮಾಯಾಮಂತ್ರಗಳಿಗೆ ವ್ಯತಿರೇಕವಾದ ಸಂಗತಿ!

"ಅವನೊಬ್ಬ ಡಕಾಯಿತರ ನಾಯಕನಾಗಿದ್ದಾನು ಪ್ರಭೂ! ರಾಜನೂ ಅಲ್ಲ, ಭೂಜನೂ ಅಲ್ಲ! ಹೆದರಿಸಲಿಕ್ಕೇ ಹಾಗೆ ಹೇಳಿಕೊಳ್ಳೋದು, ಅಷ್ಟೇ" ಎಂದನು ಸರ್ಪದಂತ.

"ಹಾಂ! ದಾರಿದೋಚುವ ಡಕಾಯಿತರ ಮುಖಂಡ ಯುವರಾಜನೆಂದು ಹೇಳಿಕೊಳ್ಳುತ್ತಾನೆಯೆ! ಏನು ಪೊಗರು! ಈಗಲೇ ನಾವು ಜಯಪುರಿಯನ್ನು ಆಕ್ರಮಿಸಿ ಬಿಡಬೇಕು. ಅವನು ಏನು ಮಾಡುತ್ತಾನೆಂಬುದು ಗೊತ್ತಾಗುತ್ತದೆ! ಆ ಕೋತಿಯೂ ಅಲ್ಲಿಗೇ ಓಡಿರಬೇಕು. ಸೈನ್ಯವು ಸಿದ್ಧವಾಗಿದೆ ತಾನೇ?" ಎಂದನು ವೀರಸಿಂಹ.

"ಕ್ಷಣಮಾತ್ರದಲ್ಲಿ ಸಿದ್ಧ ಮಾಡುತ್ತೇನೆ ಪ್ರಭೂ. ಜಯಪುರಿಯಲ್ಲಿ ಸೈನ್ಯವೇ ಇಲ್ಲ! ಅವರು ನಮ್ಮನ್ನು ಪ್ರತಿಭಟಿಸುವುದಾದರೂ ಹೇಗೆ? ಅದನ್ನು ನಾವು ಆಕ್ರಮಿಸಿದಂತೆಯೇ ಆಗುತ್ತದೆ" ಎಂದನು ಉತ್ಸಾಹದಿಂದ ಸರ್ಪದಂತ.

"ಎಂಥ ಮೂರ್ಖನೋ ನೀನು? ಆ ಸಂಗತಿ ನಮಗೆ ಗೊತ್ತಿಲ್ಲವೆಂದು ಮಾಡಿದಿಯಾ? ಆ ಪೊಗರಿನ ಪತ್ರ ಕೇಳಿದ್ದಿಯಷ್ಟೆ? ಜಯಪುರಿಯವರು ಅಮೃತಪುರಿಯ ಸಹಾಯ ಕೇಳಿದರೆ! ಆ ಸೇನೆಗಳನ್ನು ಇದಿರಿಸಲು ಸಿದ್ಧವಾಗಿರುವಿಯಾ? ಹೇಳು!" ಎಂದನು ವೀರಸಿಂಹ.

ಸರ್ಪದಂತನು "ಹೌದಲ್ಲ ಪ್ರಭೂ!" ಎಂದು ಸ್ವಲ್ಪ ಹೊತ್ತು ಮೌನವಹಿಸಿ, "ನಿಜವೇ! ಪ್ರಭುಗಳೇ, ಈಗ ಅಮೃತಪುರಿಯಲ್ಲಿ ಸೈನಿಕ ಬಲವು ಬಹಳ ಹೆಚ್ಚಾಗಿದೆಯೆಂದು ಚಾರರ ಮೂಲಕ ಗೊತ್ತಾಗಿದೆ. ನಾವು ನಮ್ಮ ಸೈನಿಕ ಬಲವನ್ನು ಹೆಚ್ಚು



ಮಾಡಿಕೊಂಡರೇನೇ ಜಯಿಸಲು ಸಾಧ್ಯ. ದುಡುಕಿ ಬಿಟ್ಟರೆ ಆಪತ್ತನ್ನು ನಾವೇ ತಂದುಕೊಂಡ ಹಾಗೆ ಆದೀತು ! ಅಮೃತಪುರಿಯ ಚಾರರು ಜಯಪುರಿಯ ಮೇಲೆ ನಿಗಾ ಇಟ್ಟಿರುವುದೂ ಗೊತ್ತಾಗಿದೆ. ಯಾವ ಕ್ಷಣದಲ್ಲಿಯೂ ಅಲ್ಲಿಯ ಸೈನ್ಯವು ಧಾವಿಸಿ ಬರ ಬಹುದು !" ಎಂದನು.

"ಮತ್ತೆ ನೀನು ಹಳೆಯ ಹಾಡೇ ಹಾಡುತ್ತಿ ! ನಾವು ಸೈನಿಕ ಬಲವನ್ನು ಹೇಗೆ ಹೆಚ್ಚಿಸಿಕೊಳ್ಳುವುದು ? ಆಯುಧಗಳನ್ನು ಕೊಂಡುಕೊಳ್ಳಲು ಬೇಕಾದಷ್ಟು ಧನವಾಗಲಿ, ಧಾನ್ಯವಾಗಲಿ ಸಂಪಾದಿಸಲಾಗದೆ ಹೋಗಿದ್ದೇವೆ. ಪ್ರತಿಯೊಂದಕ್ಕೂ ಬಂಡಾಯಗಾರರು ಅಡ್ಡ ತಗಲುತ್ತಾರೆ ! ಪ್ರಜೆಗಳ ಆಶ್ರಯದೊಂದಿಗೆ ಆ ದುಷ್ಟರಿಗೆ ಅರಣ್ಯ ಮೃಗಪಕ್ಷಿಗಳ ಸಹಾಯ ಬೇರೆ !" ಎಂದನು ವೀರಸಿಂಹ ಕೈಕೈ ಹಿಸುಕಿಕೊಳ್ಳುತ್ತ.

"ಯಾವುದಾದರೂ ರಹಸ್ಯ ನಿಧಿ ಸಿಕ್ಕಿದರೂ ಚೆನ್ನಾಗಿತ್ತು !" ಎಂದನು ಸರ್ಪದಂತ.

"ರಹಸ್ಯ ನಿಧಿ ! ರಹಸ್ಯ ನಿಧಿ !" ಎಂದು ತನಗೆ ತಾನೇ ಹೇಳಿಕೊಳ್ಳುತ್ತ ವೀರಸಿಂಹನು ಸ್ವಲ್ಪಹೊತ್ತು ತೀವ್ರವಾಗಿ ಆಲೋಚಿಸಿದನು.

ಹಠಾತ್ತಾಗಿ ಅವನಿಗೊಂದು ಆಲೋಚನೆ ಹೊಳೆಯಿತು. ಪುರಾತನ ಭವನಗಳಲ್ಲೆಲ್ಲಿಯಾದರೂ ರಹಸ್ಯ ನಿಧಿಗಳಿರುತ್ತವೆ. ಹಾಗಾದರೆ ಶಾಂತಿಪುರ ರಾಜಭವನಗಳಲ್ಲಿ ಕೂಡಾ ರಹಸ್ಯ ನಿಧಿಗಳು ಏಕಿರಬಾರದು ? ಇದ್ದೇ ಇದ್ದೀತು !

"ಹುಂ ! ನಾವೀಗ ರಾಜಭವನದ ಕಡೆಗೆ ಹೋಗೋಣ" ಎಂದು ವೀರಸಿಂಹನು ಕುದುರೆಯ ಮೇಲೆ ಹಾರಿ ಕುಳಿತು ಹೊರಡಿಸಿದನು. ಅವನ ಹಿಂದೆ ಸರ್ಪದಂತನೂ ಸೈನ್ಯವೂ ಕೂಡಾ ಹೊರಟಿತು.

* * *

ವೀರಸಿಂಹನಿಗೆ ರಾತ್ರಿ ಪೂರಾ ನಿದ್ದೆ ಬರಲಿಲ್ಲ. ಸರ್ಪದಂತನೊಂದಿಗೆ ಕೂಡಿ ರಾಜಭವನದ ಕೋಣೆ ಗಳನ್ನೆಲ್ಲಾ ಶೋಧನೆ ಮಾಡತೊಡಗಿದನು. ರಾಜ ಭವನದಲ್ಲಿ ಚಿರಕಾಲದಿಂದ ಕೆಲಸ ಮಾಡಿಕೊಂಡಿದ್ದ ಇಬ್ಬರು ಪ್ರಾಯಸಂದ ಸೇವಕರನ್ನು ತನ್ನ ಬಳಿಗೆ ಕರೆಯಿಸಿ ಅವರು ಎಷ್ಟು ಕಾಲದಿಂದ ಇರುವ ರೆಂದು ಕೇಳಿ, "ಈ ಮಹಾ ಭವನದಲ್ಲಿ ನಾವು ನೋಡದಿರುವ ಕೋಣೆಗಳಾವುದಾದರೂ ಇದ್ದರೆ ತೋರಿಸಿರಿ. ಹಾಗೆ ತೋರಿಸಿದರೆ ನಿಮಗೆ ಒಳ್ಳೆಯ ಬಹುಮಾನ ಕೊಡುತ್ತೇವೆ. ತಿಳಿದಿದ್ದು ತೋರಿಸ ದಿದ್ದರೆ ಚಿತ್ರವಧೆಗೆ ಗುರಿಪಡುವಿರಿ ಜಾಗ್ರತೆ !" ಎಂದು ಬೆದರಿಸಿದನು.

ಕಡೆಗೆ ಆ ಇಬ್ಬರಲ್ಲಿ ಒಬ್ಬ ಸೇವಕನು ಅವರನ್ನು ಕಗ್ಗತ್ತಲೆಯ ಗುಹೆಯ ಹಾಗಿದ್ದ ಒಂದು ಮೂಲೆಗೆ ಕರೆದುಕೊಂಡು ಹೋದನು. ಅಲ್ಲಿ ಒಂದು ಕಡೆ ಗೋಡೆಗೆ ಆನುಕೊಂಡಿದ್ದ ಸಣ್ಣಗಿನ ಸಂದುದಾರಿಯೊಂದಿರುವುದು ಕಂಡಿತು. ಆ ಮಾರ್ಗ



Scanned by CamScanner

ದಲ್ಲಿ ಸ್ವಲ್ಪದೂರ ಹೋದ ಮೇಲೆ, ಯಾವ ಕಾಲದಲ್ಲಿಯೋ ಬೀಗ ಹಾಕಿದ್ದ ಒಂದು ಬಾಗಿಲು ಕಂಡಿತು. ಬೀಗವೂ ದೊರಗು ದೊರಗಾಗಿ ತೆರೆಯಲು ಸಾಧ್ಯವಿಲ್ಲದಂತೆ ಅಂಟಿಹೋಗಿತ್ತು.

ವೀರಸಿಂಹನೂ, ಸರ್ಪದಂತನೂ ಬಹಳ ಕಷ್ಟ ಪಟ್ಟು ಆ ಬೀಗವನ್ನು ಒಡೆದುಹಾಕಿದರು. ಇಬ್ಬರೂ ಚಿಕ್ಕ ಕೈದೊಂದಿಯ ಬೆಳಕಿನಲ್ಲಿ ಕೋಣೆಯೊಳಗೆ ಪ್ರವೇಶಿಸಿದರು. ಅಲ್ಲಿ ದೊಡ್ಡ ದೊಡ್ಡ ಆಳುದ್ದಗಲದ ಪೆಟಾರಿಗಳನ್ನು ಒಂದರ ಮೇಲೊಂದಾಗಿ ಪೇರಿಸಿಡಲಾಗಿದ್ದುವು. ವೀರಸಿಂಹನು ಒಂದು ಕಬ್ಬಿಣದ ಪೆಟಾರಿಯನ್ನು ತೆರೆದನು. ಅದರ ತುಂಬಾ ಬಗೆಬಗೆಯ ಪುರಾತನ ಕಾಲದ ಆಭರಣಗಳು !

"ಸರ್ಪದಂತಾ! ನಮ್ಮ ಸಮಸ್ಯೆ ತೀರಿ ಹೋಯಿತು !" ಎಂದು ಆನಂದದಿಂದ ಕೂಗಿದನು ವೀರಸಿಂಹ.

ಸರ್ಪದಂತನ ಕಣ್ಣುಗಳು ಅಂಗೈಯಗಲವಾದುವು. ತಾಳಲಾಗದ ಸಂತೋಷದಿಂದ ಅವರಿಬ್ಬರೂ ಒಂದು ನಿಮಿಷ ಮೂಕರಂತಾದರು. ಆಮೇಲೆ ಪ್ರಸ್ತುತ ಒಂದು ಒಂದೊಂದೇ ಕಬ್ಬಿಣದ ಪೆಟಾರಿಯನ್ನು ತೆರೆದು ಅದರೊಳಗಿದ್ದ ಮಹದೈಶ್ವರ್ಯವನ್ನು ಕಂಡು, ಆನಂದಾತಿರೇಕದಿಂದ ಉಸಿರು ಕಟ್ಟುವಂತಾಯಿತು ಇಬ್ಬರಿಗೂ !

"ಆಭರಣಗಳೇನೋ ಸಿಕ್ಕಿದುವು. ಇವುಗಳಿಂದ ಆಯುಧಗಳನ್ನು ಕೊಂಡುಕೊಳ್ಳುವುದು ಹೇಗೆಂಬುದೇ ಪ್ರಶ್ನೆ !" ಎಂದನು ವೀರಸಿಂಹ.

"ಅದೇನೂ ದೊಡ್ಡ ಪ್ರಶ್ನೆಯಲ್ಲ ಪ್ರಭುಗಳೇ. ಚಂದ್ರಪುರಿಯ ಆಯುಧ ವ್ಯಾಪಾರಿಗಳನ್ನು ಕರೆಯಿಸಿ, ಅವರಿಂದ ಆಭರಣಗಳ ಬೆಲೆಯನ್ನು ಲೆಕ್ಕ ಹಾಕಿಸೋಣ. ಆಮೇಲೆ ಆಯುಧಗಳ ವ್ಯಾಪಾರ ಕುದುರಿಸಿಕೊಳ್ಳುವುದು ಸುಲಭ" ಎಂದನು ಸರ್ಪದಂತ.



"ಕೆಲವು ಮುಖ್ಯವಾದ ಆಭರಣಗಳನ್ನು ಹೊರತು ಪಡಿಸಿ, ಉಳಿದ ಬೆಲೆಬಾಳುವ ಆಭರಣಗಳನ್ನೂ, ಬೆಳ್ಳಿ ಬಂಗಾರದ ಪಾತ್ರಗಳನ್ನೂ ಬಿಟ್ಟುಬಿಡಲು ಸಿದ್ಧರಾಗಿರುತ್ತೇವೆ ಅಂದುಕೋ. ಮುಖ್ಯವಾಗಿ ನಮಗೆ ಆಯುಧಗಳು ಬೇಕು. ಸೈನಿಕ ಬಲವು ಗಟ್ಟಿಯಾಗಿದ್ದರೆ ಜಯಪುರಿಯನ್ನೇನು, ಸುಸಂಪನ್ನವಾದ ಅಮೃತಪುರಿಯನ್ನು ಕೂಡಾ ಅವಲೀಲೆಯಾಗಿ ಆಕ್ರಮಿಸಬಹುದು" ಎಂದನು ವೀರಸಿಂಹ ಉತ್ಸಾಹಾತಿರೇಕದಿಂದ.

ಆ ಕೋಣೆಗೆ ಗಟ್ಟಿಯಾದ ಬೀಗ ಬಿಗಿಸಿ ಇಬ್ಬರೂ ಗುಹಾ ಮಾರ್ಗದಿಂದ ಹೊರಗೆ ಬಂದರು.

ಮರುದಿನ ಬೆಳಿಗ್ಗೆ ನಂಬುಗಸ್ಥರಾದ ದೂತರ ಮೂಲಕವಾಗಿ ತಮ್ಮ ಸಂದೇಶವನ್ನು ಚಂದ್ರಪುರಿಗೆ ಕಳುಹಿಸಿದರು. ದೂತರು ಹಿಂದಿರುಗಿ ಬಂದು, ಚಂದ್ರಪುರಿಯ ವ್ಯಾಪಾರಿಗಳಿಂದ ನಿಪುಣರು ಮೂರು ದಿನಗಳಲ್ಲಿ ಬರುವರೆಂದು ತಿಳಿಯಪಡಿಸಿದರು. ತನ್ನ



Scanned by CamScanner



ನಿಪುಣರು ಶಾಂತಿಪುರದ ರಾಜಭವನವನ್ನು ತಲಪುವಾಗ ರಾತ್ರಿಯಾಯಿತು. ವೀರಸಿಂಹನು ಸ್ವತಃ ಇದಿರಾಗಿ ಹೋಗಿ ಅವರಿಗೆ ಸ್ವಾಗತ ಹೇಳಿ ಬರಮಾಡಿಕೊಂಡನು. ರಹಸ್ಯ ಮಂದಿರದೊಳಗೆ ಸಿಕ್ಕಿದ ಬೆಲೆಬಾಳುವ ಮುಖ್ಯ ಮುಖ್ಯ ಆಭರಣಗಳನ್ನೂ ಅಲ್ಲಿದ್ದ ದೊಡ್ಡ ದೊಡ್ಡ ಪೆಟಾರಿಗಳನ್ನು ತೆರೆದು ತೆರೆದು ಅವರಿಗೆ ತೋರಿಸಿದನು.

ಒಂದೇ ಸ್ಥಳದಲ್ಲಿ ಅಸಂಖ್ಯಾಕವಾದ ಆಭರಣಗಳನ್ನೂ ಅವುಗಳ ನಾಣ್ಯತೆಯನ್ನೂ ನೋಡಿ ಅತ್ಯಾಶ್ಚರ್ಯಪಟ್ಟ ಆ ನಿಪುಣರು "ಆಹಾಹಾ! ವೀರಸಿಂಹ ಮಹಾರಾಜರೇ! ನೀವು ಬಹುದೊಡ್ಡ ಅಮೂಲ್ಯ ಭಾಗ್ಯವಂತರು" ಎಂದು ಪದೇ ಪದೇ ಹೊಗಳುತ್ತಿದ್ದರು.

ಅನಂತರ ಔತಣದೂಟವಾದ ಮೇಲೆ, ನಿಪುಣರು ಪ್ರಧಾನ ಮಂಟಪದ ಕಡೆಗೆ ನಡೆಯುತ್ತ, ವೀರಸಿಂಹನನ್ನು ನೋಡಿ, "ಇಲ್ಲಿ ಯಾವ ಯಾವ ಆಭರಣಗಳು ಎಷ್ಟೆಷ್ಟಿವೆ. ಅವುಗಳ ಬೆಲೆ ಎಷ್ಟೆಷ್ಟು ಎಂಬುದನ್ನು ಶೋಧಿಸಿ ನಿರ್ಣಯಿಸೋಣ. ಮಣಿಗಳೂ, ಮಾಣಿಕ್ಯಗಳೂ ಹೊದಿಸಿದ ರಾಣಿಯವರ ಹಂಸತೂಲಿಕಾತಲ್ಪ, ಶಯನಾಗಾರದ ಗೋಡೆಗಳಿಗೆ ಹೊದುಗಿಸುವ ಮಣಿಗಳ ಬೆಲೆ ಎಷ್ಟಿರುವುದೆಂದು ಲೆಕ್ಕ ಹಿಡಿಯಬೇಕು. ಅದಕ್ಕೆ ತುಂಬಾ ಹೊತ್ತು ಬೇಕಾಗುತ್ತದೆ. ಆದ್ದರಿಂದ ನಾವು ಒಳಗಿರುವಾಗ ನೀವು ಮಂಟಪದ ಹೊರಗಿನ ಬಾಗಿಲಿಗೆ ತಾಳ ಹಾಕಿಸಿ ಸ್ವತಃ ಕಾವಲಿದ್ದರೆ ಒಳ್ಳೇದು. ನಮಗೆ ಪ್ರಶಾಂತತೆಯೂ ರಕ್ಷಣೆಯೂ ಉಂಟಾಗುತ್ತದೆ. ಸೂರ್ಯೋದಯವಾಗುವುದರೊಳಗೆ ಎಲ್ಲದರ ಲೆಕ್ಕಪಕ್ಕಗಳೂ ಮುಗಿಯುತ್ತವೆ. ನಾವು ನಿರ್ಣಯಿಸಿದ ಬೆಲೆಗಳನ್ನು ನೀವು ಒಪ್ಪಿದರೆ ತೀರಿತು."

"ಒಳ್ಳೇದೇ ಒಳ್ಳೇದೇ. ನಿಮ್ಮ ಇಷ್ಟದಂತೆಯೇ ಆಗಲಿ. ಸಣ್ಣ ಸಣ್ಣ ವಿಷಯಗಳಿಗೆ ಚರ್ಚೆ

ಚಿರಕಾಲದ ವಾಂಛೆ ತೀರುತ್ತದೆಂಬ ಆಶೆಯಲ್ಲಿ ವೀರಸಿಂಹನೂ ಆನಂದದ ಕನಸು ಕಾಣತೊಡಗಿದನು.

ಮೂರು ದಿನಗಳ ನಂತರ ಗೂಢಚಾರಿಯೊಬ್ಬನು ವೀರಸಿಂಹನ ಬಳಿಗೆ ಬಂದು, "ಪ್ರಭೂ, ಚಂದ್ರಪುರಿಯ ಆಯುಧ ವರ್ತಕರಿಂದ ಇಪ್ಪತ್ತೈದು ಮಂದಿ ನಿಪುಣರು ಹೊರಟು ಇಲ್ಲಿಗೆ ಬರುತ್ತಿದ್ದಾರೆ" ಎಂದು ತಿಳಿಸಿದನು.

"ಇಪ್ಪತ್ತೈದು ಮಂದಿಯೇ! ಐದಾರು ಮಂದಿ ಬರುವರೆಂದು ಅಂದುಕೊಂಡೆನು. ಓ! ನಮ್ಮ ಮೇಲೆ ಅಪ್ಪರಮಟ್ಟಿಗೆ ಗೌರವವೆಂದಾಯಿತು! ಸರ್ಪದಂತಾ! ಒಳ್ಳೊಳ್ಳೆಯ ಅಡಿಗೆ ತಯಾರಿಸು. ಅವರೆಲ್ಲರಿಗೂ ರಾಜಭವನದಲ್ಲಿಯೇ ತಂಗುವ ಏರ್ಪಾಡು ಮಾಡಿಸು. ಆಗಲೇ ಸಂತೋಷಪಟ್ಟು ನಮಗೆ ಅನುಕೂಲವಾಗಿ ಪ್ರವರ್ತಿಸುತ್ತಾರೆ. ಈಗಲೇ ಏರ್ಪಾಡು ಪ್ರಾರಂಭಿಸು" ಎಂದು ವೀರಸಿಂಹನು ಸರ್ಪದಂತನಿಗೆ ಆಜ್ಞೆ ಮಾಡಿದನು.

ಮಾಡುವುದಿಲ್ಲ " ಎಂದು ವೀರಸಿಂಹನು ಮಂಟಪದ ಬಾಗಿಲು ಭದ್ರಪಡಿಸಿ ಹೊರಗೇ ಇದ್ದನು.

ನಿಪುಣರು ತಮ್ಮ ಕೆಲಸದಲ್ಲಿ ಮಗ್ನರಾದರು. ಅರ್ಧರಾತ್ರಿ ಮೀರುವವರೆಗೂ ಒಳಗೆ ಶಬ್ದ ಕೇಳುತ್ತಲೇ ಇದ್ದಿತು.

ಬೆಳಗಾದ ಮೇಲೆ ವೀರಸಿಂಹ ಮಂಟಪದ ಬಾಗಿಲನ್ನು ತೆರೆಯಿಸಿ ಒಳಗೆ ಬಂದನು. ಮನುಷ್ಯರ ಸುಳಿವೂ ಶಬ್ದವೂ ಅಲ್ಲಿರಲಿಲ್ಲ. ಕಷ್ಟಪಟ್ಟು ಕೆಲಸ ಮಾಡಿದ್ದರಿಂದ ಎಲ್ಲಿಯಾದರೂ ನಿದ್ದೆಮಾಡುವರೇನೋ ಅಂದುಕೊಂಡು ಒಳಗೋಣೆಗಳಿಗೇ ಹೋಗಿ ನೋಡಿದನು. ಜತೆಯಲ್ಲೇ ಸರ್ಪದಂತನೂ ಇದ್ದನು. ಆದರೆ ಯಾರೊಬ್ಬರ ಜಾಡೂ ಕಾಣಿಸಲಿಲ್ಲ !

" ಆಭರಣಗಳೆಲ್ಲಿ ? ಪೆಟಾರಿಗಳೆಲ್ಲಿ ? ನಿಪುಣರು ಎಲ್ಲಿಗೆ ಹೋದರು ?..." ವೀರಸಿಂಹನೂ ಸರ್ಪದಂತನೂ ಹುಚ್ಚರ ಹಾಗೆ ಕೂಗುತ್ತ ಕುಣಿಯುತ್ತ ಭವನದೊಳಗಿನ ಎಲ್ಲಾ ಕೋಣೆಗಳನ್ನೂ ಗಾಳಿಸಿದರು. ಯಾವ ಪ್ರಯೋಜನವೂ ಕಾಣಲಿಲ್ಲ !

" ಡಕಾಯಿತರು! ಬಂದವರೆಲ್ಲರೂ ಡಕಾಯಿತರೇ! ಕೊಳ್ಳೇಗಾರರೇ ! ಇದೇನು ಕೇಡುಗಾಲ ಬಂತಪ್ಪಾ ! ಹಾಕಿದ ಬಾಗಿಲೆಲ್ಲ ಹಾಕಿದ ಹಾಗೇ ಇರುವಾಗ ಆ ದುರ್ಮಾರ್ಗಿಗಳು ಹೇಗೆ ತಪ್ಪಿಸಿಕೊಂಡರು ? " ಎಂದು ಹುಚ್ಚುಕೂಗು ಹಾಕುತ್ತಿದ್ದನು ವೀರಸಿಂಹ.

ರಾಣಿಯ ಶಯನಾಗಾರದ ರಹಸ್ಯದ್ವಾರವು ತೆರೆದಿದ್ದುದರಿಂದ ನಡೆದ ಸಂಗತಿ ಸರ್ಪದಂತನಿಗೆ ಗೊತ್ತಾಯಿತು. ಆ ರಹಸ್ಯ ಮಾರ್ಗದ ಮೂಲಕವಾಗಿಯೇ ಅಷ್ಟಷ್ಟು ದೊಡ್ಡ ಪೆಟಾರಿಗಳನ್ನು ಆಭರಣಗಳ ಸಮೇತ ಸಾಗಿಸಿಕೊಂಡು ಹೋದವರು ಡಕಾಯಿತರೆಂದು ಆತನಿಗೆ ತಿಳಿಯಿತು. ಅಲ್ಲಿ ದೊರಕಿದ ಒಂದು ಲೇಖನದಲ್ಲಿ ಹೀಗೆ ಬರೆಯಲ್ಪಟ್ಟಿತ್ತು :

" ರಾಜ ಕುಟುಂಬಕ್ಕೆ ಸೇರಿದ ಅಮೂಲ್ಯ ಆಭರಣಗಳನ್ನು ನಿಮ್ಮಿಂದ ಕಾಪಾಡಿದೆವು. ಅವೆಲ್ಲಾ ರಾಜ ಕುಟುಂಬಕ್ಕೆ ವಾರಸುದಾರನಾದ ಯುವರಾಜ ಸಂದೀಪನ ಸಂರಕ್ಷಣೆಯಲ್ಲಿ ಭದ್ರವಾಗಿವೆ. ಇನ್ನೊಂದು ವಿಷಯ. ನಿಮ್ಮ ಮನುಷ್ಯರನ್ನು ಕೂಡಲೇ ದಕ್ಷಿಣ ದಿಕ್ಕಿನಲ್ಲಿರುವ ಆನೆಬೆಟ್ಟದ ಕಡೆಗೆ ಕಳುಹಿಸಬೇಕು. ಚಂದ್ರಪುರದಿಂದ ಬಂದ ನಿಜವಾದ ವ್ಯಾಪಾರಿಗಳು ಅಲ್ಲಿಯೇ ಇದ್ದಾರೆ. ಅವರಿಗೆ ಆಹಾರಪಾನೀಯಗಳನ್ನು ಕೊಡಿಸಿರಿ. ಅಷ್ಟೇ ಅಲ್ಲ, ಅವರ ಕಟ್ಟುಗಳನ್ನು ಕಡಿದುಹಾಕಲು ಕತ್ತಿಗಳನ್ನು ತೆಗೆದುಕೊಂಡು ಹೋಗಲು ಮರೆಯಬೇಡಿ."

ಸರ್ಪದಂತನು ಭಟರೊಂದಿಗೆ ಹೊರಟುಹೋಗಿ ಬಂಡಾಯಗಾರರು ಬಂಧಿಸಿಟ್ಟಿದ್ದ ಚಂದ್ರಪುರಿಯ ವರ್ತಕರನ್ನು ಬಂಧಮುಕ್ತ ಮಾಡಿದನು.

( ಮುಂದಿನ ಸಂಚಿಕೆಯಲ್ಲಿ ಮುಕ್ತಾಯ )



Scanned by CamScanner



# ಡಕಾಯಿತ ಯುವರಾಜ

## ೧೮

[ವೀರಸಿಂಹನು ಅಂದುಕೊಂಡಂತೆ ಯಾವುದೂ ನಡೆಯಲಿಲ್ಲ. ಅಪಹರಿಸಿದ ಬಂಗಾರದ ವಿಗ್ರಹವು ದಾರಿಯಲ್ಲಿ ಮಾಯವಾಯಿತು. ವಿವಾಹಕ್ಕಾಗಿ ಯುವರಾಣಿಯನ್ನು ಜಯಪುರಿಯಿಂದ ಸಾಗಿಸುವಾಗ ಕೋತಿಯಾಗಿ ತಪ್ಪಿಸಿಕೊಂಡಳು. ರಾಜಭವನದೊಳಗೆ ಲಭಿಸಿದ ರಹಸ್ಯ ನಿಧಿಗಳನ್ನು ವ್ಯಾಪಾರಿಗಳ ವೇಷದಲ್ಲಿ ಬಂದ ಡಕಾಯಿತರು ಎತ್ತಿಕೊಂಡು ಹೋಗಿಬಿಟ್ಟರು. ಹೀಗೆ ವೀರಸಿಂಹನು ದಿಕ್ಕುಗಾಣದಿರಲು... ...ಆಮೇಲೆ]

ಅತ್ತ ಅಮೃತಪುರಿಯ ರಾಜ ಸತ್ಯಸೇನನು ವಸಂತನೊಂದಿಗೆ "ನನಗೆ ನನ್ನ ಮೊಮ್ಮಗನನ್ನು ನೋಡಬೇಕೆಂದು ತೀವ್ರವಾಗಿ ಆಸೆಯಾಗುತ್ತಿದೆ ವಸಂತಾ. ಅದಕ್ಕೆ ಏನೋ ಒಂದು ಉಪಾಯ ನೀನೇ ಯೋಚಿಸಬೇಕಪ್ಪಾ" ಎಂದನು.

"ಶಾಂತರಾಗಿರಿ ಪ್ರಭೂ. ಅತಿರೇಕ ಅನ್ಯಾಯವಾಗಿ ಅಪಹರಿಸಲ್ಪಟ್ಟ ತನ್ನ ತಂದೆಯ ರಾಜ್ಯವನ್ನು ವಶಪಡಿಸಿಕೊಳ್ಳದ ವಿನಾ ತಮ್ಮ ದರ್ಶನಕ್ಕೆ ಬರಲಾರೆನೆಂದು, ಅದನ್ನು ಸ್ವಾಧೀನಪಡಿಸಿಕೊಂಡೇ ನಿಮ್ಮ ಆಶೀರ್ವಾದ ಪಡೆಯಲು ಬರುವೆನೆಂದು ಯುವರಾಜನ ದೃಢ ನಿಶ್ಚಯ; ಪ್ರತಿಜ್ಞೆಯಂಥ ನಿಶ್ಚಯ ಅವರದು. ಅವರು ಸಂಕಲ್ಪ ಮೀರುವವರಲ್ಲ. ಅದುವರೆಗೆ ನೀವು ಸಹನೆಯಿಂದಿರಬೇಕು ಪ್ರಭುಗಳೇ. ಉದಾರ ವೀರರಾದ ಆ ಮಹಾ ಸಾಹಸ ಕಾರ್ಯ ಸಂಪನ್ನರಾದ ಯುವರಾಜರ ಆದೇಶದಂತೆಯೇ ನಾವು ಹೋರಾಟ ನಡೆಸುತ್ತಿದ್ದೇವೆ. ಗತಿಸಿದ ಮಹಾರಾಜರ ದಿವ್ಯಾತ್ಮದ ಆಶಂಸೆಯ ಪ್ರಭಾವದಿಂದಲೂ, ನಿಮ್ಮ ಆಶೀರ್ವಾದ ಬಲದಿಂದಲೂ ಈಗ ನಾವು ವೀರಸಿಂಹನ ಸೇನೆಗಳನ್ನು ಮುಖಾಮುಖಿ ಇದಿರಿಸುವಷ್ಟು ಬಲ



Scanned by CamScanner



ಸ್ಥಾಯಿಗೆ ಏರಿದ್ದೇವೆ. ತಮ್ಮ ವಾಂಛೆ ನೆರವೇರಲು ಇನ್ನು ಹೆಚ್ಚು ಕಾಲವಿಲ್ಲ. ಅದುವರೆಗೆ ನಿಧಾನಿಸ ಬೇಕು ಪ್ರಭೂ" ಎಂದನು ವಸಂತ.

"ವಸಂತಾ, ಸಂದೀಪನನ್ನು ನೆನೆದರೇನೇ ನನಗೆ ಬಹಳ ಉತ್ಸಾಹವೇಳುತ್ತದೆ. ಮನಸ್ಸಿಗೆ ಆನಂದದ ಗಾಳಿ ಬೀಸುತ್ತದೆ. ಆದರೂ ಸುಮೇಧ ರಾಜ್ಯವನ್ನು ನಿಜವಾದ ವಾರಸದಾರನಿಗೆ ಸಿಗುವಂತೆ ಮಾಡಲು ನೀವೆಲ್ಲಾ ಸಾಗಿಸುವ ಧಾರ್ಮಿಕ ಹೋರಾಟದಲ್ಲಿ ನಾನೂ ನನ್ನ ಕರ್ತವ್ಯವನ್ನು ನಿರ್ವಹಿಸಬೇಕಷ್ಟೆ? ಹೇಗೆ ಸುಮ್ಮನೆ ಕೂಡಲಿ? ನಿಮ್ಮ ಕೆಲಸ ನೋಡು ವಾಗ ನಾನು ಸುಮ್ಮನೆ ಕುಳಿತುಕೊಳ್ಳುವುದೆಂದರೆ ದಿನವೊಂದು ಯುಗದಂತೆ ಕಾಣುತ್ತದೆ" ಎಂದನು ಸತ್ಯಸೇನ.

"ಪ್ರಭುಗಳೇ, ತಮ್ಮ ಸಹಾಯಾಶ್ರಯಗಳಿಂದ ತಾನೇ ನಮ್ಮ ಹೋರಾಟ ನಿರಾತಂಕವಾಗಿ ಸಾಗು ತ್ತಿರುವುದು? ತಮ್ಮ ಸೈನಿಕರೇ ನಮಗೆಲ್ಲಾ ಯುದ್ಧ ಶಿಕ್ಷಣ ಕೊಡುವುದಲ್ಲವೆ? ಎಲ್ಲಕ್ಕೂ ಮೇಲೆ ನಮ್ಮೆಲ್ಲರ ಆತ್ಮ ವಿಶ್ವಾಸಕ್ಕೆ ಮೂಲಾಧಾರವೇ ಅಮೃತಪುರಿಯ ಸೈನ್ಯವೆಂಬುದು ನಿಮಗೆ ಗೊತ್ತಿಲ್ಲವೇ?, ಆದರೂ ಬರಲಿರುವ ಕೊನೆಯ ಹೋರಾಟದಲ್ಲಿ ನಿಮ್ಮ ಸೈನ್ಯವು ಕೀಲಕ ಪಾತ್ರ ವಹಿಸಲಿದೆ. ಇದೆಲ್ಲಾ ನಿಮ್ಮ ಕರ್ತವ್ಯವೂ ಆಯಿತಲ್ಲಾ? ಈ ಯೋಚನೆಯಲ್ಲಿ ಮನೆಯೊಳಗೆ ತಿರುಗಾಡಿಕೊಂಡಿದ್ದರೆ ದಿನವೊಂದು ಕ್ಷಣವಾಗದೇ ಸ್ವಾಮಿ!" ಎಂದನು ಭಾವಾವೇಶದಿಂದ ವಸಂತ.

ಸತ್ಯಸೇನ ರಾಜನು ವಸಂತನ ಯುಕ್ತಿಯುಕ್ತ ವಾದ ಮಾತುಗಳಿಂದ ಉತ್ಸಾಹಿತನಾಗಿ ಮಂತ್ರಿ ಯನ್ನೂ, ಸೇನಾಧಿಪತಿಯನ್ನೂ ಕರೆಯಿಸಿದನು. ನಾಲ್ವರೂ ರಹಸ್ಯಾಲೋಚನೆ ಮಾಡತೊಡಗಿದರು.

* * *

"ಪ್ರಭುಗಳೇ, ಇದೊಂದು ಒಳ್ಳೆಯ ಸಂಗತಿ ಯೆಂದು ನನ್ನ ಅಭಿಪ್ರಾಯ. ಮತ್ತೊಂದು ಅದ್ಭುತ ನಡೆದಿದೆ! ತಮ್ಮ ಊಹನೆ ನಿಜವೇ ಆದ ಹಾಗಿದೆ! ಪರಮಾಶ್ಚರ್ಯ!" ಎಂದು ಪ್ರಧಾನ ಗೂಢಚಾರಿ ವೀರಸಿಂಹನೊಂದಿಗೆ ಹೇಳಿದನು.

"ಏನದು?" ಎಂದು ವೀರಸಿಂಹನು ಕೇಳಿದನು.

"ಯುವರಾಣಿ ಸುಕನ್ಯೆಯಾಗಿದ್ದದ್ದು ನಿಜಕ್ಕೂ ಕೋತಿಯೇ! ಆ ಕೋತಿ ಈಗ ಯುವರಾಣಿ ಸುಕನ್ಯಾದೇವಿಯಾಗಿ, ಮಾರ್ಪಟ್ಟು ನಿಂತಿದೆ!... ಅಲ್ಲಲ್ಲ—ನಿಂತಿದ್ದಾರೆ ಸುಕನ್ಯಾ ದೇವಿಯುವರು!"

"ನಿಜವೇ? ಮಂತ್ರಶಕ್ತಿಯನ್ನು ಊಹಿಸಿದ್ದು ನಿಜವೇ ಆಯಿತು. ಭೇಷ್! ಈಗ ಸುಕನ್ಯೆ ಎಲ್ಲಿದ್ದಾಳೆ?" ಎಂದು ಆತುರದಿಂದ ಆಕಾಶಕ್ಕೆ ಹಾರುವಂತೆ ತುಡಿಸಿದನು ವೀರಸಿಂಹ.

"ಅವರೀಗ ತಾಯಿತಂದೆಯರ ಹತ್ತಿರ ಇದ್ದಾರೆ ಮಹಾಪ್ರಭೂ! ಒಂದು ಕೋತಿ ಓಡುತ್ತಾ ಹೋಗಿ ಒಂದು ತಿರುವಿನಲ್ಲಿ ಮರಕ್ಕೆ ಹಾರುವಾಗಲೇ



Scanned by CamScanner

ಕೋತಿ ಮಾಯವಾಗಿ ಸುಕನ್ಯಾದೇವಿಯವರು ವೇಗವಾಗಿ ಅವರ ಮನೆಗೆ ಹೋದುದನ್ನು ನಮ್ಮ ಚಾರರು ಕಂಡು ಓಡಿಬಂದು ನನಗೆ ಹೇಳಿದರು !" ಎಂದನು ಗೂಢಚಾರಿ.

"ಓಹೋ ! ಜಯಪುರಿಗೇ ಹೋದಳೆಂದಾಯಿತು. ಹಾಗಾದರೆ ಶಂಕರವರ್ಮ ಆ ಸುದ್ದಿ ನಮಗೇಕೆ ತಿಳಿಸಲಿಲ್ಲ ?" ಎಂದು ವೀರಸಿಂಹನು ಸ್ವಲ್ಪಹೊತ್ತು ತೀವ್ರವಾಗಿ ಆಲೋಚನೆ ಮಾಡಿ, ಒಬ್ಬ ಉದ್ಯೋಗಸ್ಥನನ್ನು ಹತ್ತಿರ ಕರೆದು, "ಶಂಕರವರ್ಮನೊಂದಿಗೆ ಕಠಿಣವಾಗಿ ಪ್ರವರ್ತಿಸಲು ಮನಸ್ಸು ಬರುವುದಿಲ್ಲ. ನಾಳೆಯೋ ನಾಳಿದ್ದೋ ಅವನ ಮಗಳನ್ನು ಮದುವೆ ಮಾಡಿಕೊಳ್ಳುತ್ತೇನಷ್ಟೇ ? ಆದ್ದರಿಂದ ನೀನು ಜಯಪುರಿಗೆ ಹೋಗಿ, ನಾನೇ ಬಂದು ಸುಕನ್ಯೆಯನ್ನು ಸ್ವತಃ ಕರೆದುಕೊಂಡು ಹೋಗುವೆನೆಂದು ನನ್ನ ಮಾತಾಗಿಯೇ ಹೇಳು. ಈಸಾರಿ ಪ್ರಯಾಣ ಸಮಯದಲ್ಲಿ ಸುಕನ್ಯಾ ಮಣಿಯನ್ನು ಒಂದು ಕ್ಷಣವೂ ಬಿಟ್ಟಿರಬಾರದು. ಅಷ್ಟೇ ಅಲ್ಲದೆ ಅವಳು ಮತ್ತೆ ಕೋತಿಯಾಗಿ ಮಾರ್ಪಡದ ಹಾಗೆ ನೋಡಿಕೊಳ್ಳಲು ಈ ಮೊದಲೇ ಸರ್ಪದಂತನೊಂದಿಗೆ ಹೇಳಿದಂತೆ ಒಬ್ಬ ಗಟ್ಟಿ ಮಾಂತ್ರಿಕನೂ ನಮ್ಮೊಂದಿಗಿರುತ್ತಾನೆ. ಈ ಸಂಗತಿ ಮಾತ್ರ ನಮ್ಮೊಳಗೇ ಇರಲಿ. ಶಂಕರವರ್ಮನೊಂದಿಗೆ ಹೇಳಬೇಡ. ಹೋಗಿ ಬಾ" ಎಂದನು.

ಆಗಲೇ ಉದ್ದುದ್ದವಾದ ಗಡ್ಡಮೀಸೆಗಳಿಂದ ವಿಚಿತ್ರ ವೇಷಧಾರಣೆಯಲ್ಲಿದ್ದ ಒಬ್ಬ ಮಾಂತ್ರಿಕನು ಅಲ್ಲಿಗೆ ಬಂದು "ಜಯವಾಗಲಿ ಮಹಾರಾಜರಿಗೆ !" ಎಂದು ವೀರಸಿಂಹನಿಗೆ ನಮಸ್ಕರಿಸಿ ಮುಗುಳ್ನಗುತ್ತಾ ಗಡ್ಡ ಮೀಸೆ ನೀವುತ್ತಾ ನಿಂತನು.

ಶಂಕರವರ್ಮನ ಹತ್ತಿರ ಹೋದ ಉದ್ಯೋಗಸ್ಥನು ಕಪ್ಪಿಟ್ಟ ಮೋರೆಯೊಂದಿಗೆ ಬೇಗನೇ ತಿರುಗಿ ಬಂದು, ನಮಸ್ಕಾರ ಮಾಡಿ ಭಯಕಂಪಿತ ಕಂಠದಿಂದ, "ಘೋರ ಅಪಮಾನವಾಗಿ ಹೋಯಿತು ಮಹಾಪ್ರಭೂ ! ನನ್ನನ್ನೂ, ನನ್ನನ್ನು ದೂತನಾಗಿ ಕಳುಹಿಸಿದ ತಮ್ಮನ್ನೂ ಸಹ ಘೋರ ರೀತಿಯಲ್ಲಿ ಅವಮಾನಪಡಿಸಿಬಿಟ್ಟರು ! ಬಾಯಿತೆರೆದು ಹೇಳಲಿಕ್ಕೇ ಸಾಧ್ಯವಾಗದಂಥ ಅವಮಾನ !" ಎಂದನು.



"ಏನೇನು ! ನಮ್ಮನ್ನು ಅವಮಾನಪಡಿಸುವುದೇ ? ಹೆದರದೆ ಹೇಳು. ಯಾರು ಹಾಗೆ ಮಾಡಿದ್ದು ? ಯಾವ ನೀಚರು ? ಏನೆಂದರು ?" ಎಂದು ಕೇಳಿದನು ಕೋಪಾವೇಶದಿಂದ.

"ನಿಮ್ಮ ದೂತನಾದ ನನ್ನನ್ನು ನೋಡಲಿಕ್ಕೇ ಮೊದಲು ನಿರಾಕರಿಸಿಬಿಟ್ಟರು. ಆಮೇಲೆ ಶಂಕರವರ್ಮನ ಸಲಹಾದಾರನಾದ ಹೊಸ ಯುವಕನೊಬ್ಬನು ಮುಂದೆ ಬಂದು, ನಿಮ್ಮನ್ನು...ನಿಮ್ಮನ್ನು..." ಎಂದು ಮುಂದೆ ಹೇಳಲು ಭಯಪಟ್ಟನು.

"ಏನು ಹೇಳಿದನೋ ? ಬೊಗಳೋ !" ಎಂದು ಅಧಟಿದನು ವೀರಸಿಂಹ.



ಸುಕನ್ಯೆ ಓಡಿಹೋಗಿ ನಿಲ್ಲಲು ನೆರಳಿಲ್ಲದ ಹಾಗೆ ಮಾಡಿಬಿಡುತ್ತೇನೆ. ಜಯಪುರಿಯ ಪ್ರಜೆಗಳೆಲ್ಲರನ್ನೂ ಹತಾಹತ ಮಾಡಿಬಿಡುತ್ತೇನೆ. ಮನೆಮಂದಿರಗಳನ್ನೆಲ್ಲಾ ಮಣ್ಣುಪಾಲು ಮಾಡುತ್ತೇನೆ! ಪಶುಗಳನ್ನು ಕೂಡಾ ವಧಿಸಿಬಿಡುತ್ತೇನೆ!" ಎಂದು ಕೂಗಿ ಕಿರಿಚಾಡಿದನು ವೀರಸಿಂಹ.

"ಹೌದು ಪ್ರಭೂ! ತಮ್ಮಂಥವರನ್ನು ಅವಮಾನಿಸಿದವರನ್ನು ಸುಮ್ಮನೆ ಬಿಡಲೇಬಾರದು! ಸರಿಯಾದ ಬುದ್ಧಿ ಕಲಿಸಬೇಕು!" ಎಂದನು ರಾಜಾಧಿಕಾರಿ.

ಕೂಡಲೇ ವೀರಸಿಂಹನು ಸರ್ಪದಂತನನ್ನು ಬರಮಾಡಿಸಿ, "ಈ ಕ್ಷಣದಲ್ಲೇ ನಾವು ಜಯಪುರಿಯ ಮೇಲೆ ದಂಡೆತ್ತಬೇಕು. ಸೈನ್ಯವನ್ನು ಸಿದ್ಧಮಾಡಿ ಹೊರಡಿಸು. ಯಾವುದೇನಾದರೂ ಚಿಂತೆಯಿಲ್ಲ" ಎಂದು ಆಜ್ಞಾಪಿಸಿದನು.

"ಅದರಿಂದ ಆಗುವುದಿಷ್ಟೇ ಮಹಾಪ್ರಭೂ! ಜಯಪುರಿಯು ಸುಮೇಧದ ಒಂದು ಭಾಗವಾಗಿ ಕೂಡಿ ಹೋಗುತ್ತದೆಯೇ ಹೊರತು, ಮತ್ತಾವ ಅಪಾಯವೂ ಮುಗುಚಿಬೀಳದು. ಅದರ ಮೇಲೆ ಜಯಪುರಿಯ ವಿಜಯದಿಂದ ನಮ್ಮ ಸೈನ್ಯಕ್ಕೆ ಉತ್ತೇಜನವೂ ಬರುತ್ತದೆ" ಎಂದನು ಸರ್ಪದಂತ.

"ಹೌದು, ಬಹಳ ಕಾಲದಿಂದ ನಮ್ಮ ಸೈನಿಕರು ಸಂಬಳ ಭತ್ಯಗಳಿಂದಲೇ ಜೀವಿಸಿಕೊಂಡಿದ್ದಾರೆ. ಜಯಪುರಿಯನ್ನು ಜಯಿಸುವಾಗ ಅಲ್ಲಿಯ ಪೌರರ ಹಣವನ್ನು ಕೊಳ್ಳೇ ಹೊಡೆಯಬಹುದಷ್ಟೆ? ಕೊಳ್ಳೆ ಹೊಡೆದವುಗಳಲ್ಲಿ ಬೆಲೆಬಾಳುವ ಆಭರಣಾದಿಗಳನ್ನು, ಧನದ ಗಂಟುಗಳನ್ನು ನಮಗೆ ಕೊಡಬೇಕೆನ್ನಬಹುದು. ಅವರೂ ಸ್ವಲ್ಪ ತಿನ್ನಲಿ, ಏನನ್ನುತ್ತಿ?" ಎಂದನು ವೀರಸಿಂಹ.

"ಹೌದಲ್ಲ, ತಪ್ಪೇನಿಲ್ಲ. ಸಾಕಷ್ಟು ಕೊಳ್ಳೆ ಹೊಡೆಯಲಿಕ್ಕೂ ರಾಜಾಜ್ಞೆಯಿದೆ ಎಂದರೆ ಬಹಳ

"ಅವನು ಹೇಳಿದ್ದು—ಯುವರಾಣಿ ಕೋತಿಯಾಗಿ ಮಾರ್ಪಟ್ಟಳೆಂದು ಭ್ರಮಿಸಿದ ನಿನ್ನ ವೀರಸಿಂಹನೇ ನಿಜವಾದ ಹುಚ್ಚು ಕೋತಿ! ನಿಮ್ಮ ಚೇಷ್ಟೆಗಳೆಲ್ಲಾ ಮೊದಲಿನಿಂದಲೇ ಹುಚ್ಚು ಚೇಷ್ಟೆಗಳಂತೆ! ಕಳ್ಳು ಕುಡಿದು ಹುಚ್ಚು ಹಿಡಿದ ಮಹಾ ದುಷ್ಟ ಚೇಷ್ಟೆಯ ಕೋತಿಯಾದ ನಿಮ್ಮ ಕೈಯಿಂದ ಅವರ ಯುವ ರಾಣಿ ಸುಕನ್ಯೆ ಉಪಾಯದಿಂದ ತಪ್ಪಿಸಿಕೊಂಡದ್ದಂತೆ! ಇದಕ್ಕಿಂತ ಮೇಲೆ ನಿಮ್ಮ ಸಹಾಯಕರಾದ ನಮ್ಮಂಥ ಹುಚ್ಚು ಕೋತಿಗಳಿಗೆ ಮುಖಂಡನಾದ ವೀರಸಿಂಹನಿಗೆ ಹೇಳುವಂಥಾದ್ದೇನೂ ಇಲ್ಲ. ನಡೀ! ಎಂದು ಒದ್ದು ಝಾಡಿಸಿದ ಹಾಗೆ ನನ್ನನ್ನು ಓಡಿಸಿಬಿಟ್ಟರು, ಮಹಾಪ್ರಭೂ!" ಎಂದನು ದೂತನಾಗಿ ಹೋಗಿಬಂದ ಅಧಿಕಾರಿ.

"ಆಂ! ಎಂಥಾ ತಲೆತಿರುಕ ಪೊಗರು! ಈ ಕ್ಷಣದಲ್ಲೇ ಆ ಮುದಿ ಶಂಕರವರ್ಮನನ್ನೂ, ಅವನ ರಾಜ್ಯವನ್ನೂ ಸರ್ವನಾಶ ಮಾಡದಿದ್ದರೆ ನಾನೇಕೆ?

ಉತ್ಸಾಹದಿಂದ ಯುದ್ಧ ಮಾಡುತ್ತಾರೆ. ನಿಮ್ಮ ಆಜ್ಞೆಯಂತೆ ಈಗಲೇ ಎಲ್ಲಾ ಸಿದ್ಧಪಡಿಸುತ್ತೇನೆ" ಎಂದನು ಸರ್ಪದಂತ.

ನೆರೆದೇಶವನ್ನು ಕಬಳಿಸಬೇಕೆಂಬ ದುರಾಶೆ ಯಿಂದಾಗಿ ಜಯಪುರಿಯ ಸೈನ್ಯ ಬಲದ ಸತ್ಯವು ಸ್ಫುರಿಸಲಿಲ್ಲ. ಸಿಕ್ಕಿದಷ್ಟು ಬಾಚಿಕೊಳ್ಳಲು ಇದ್ದ ಸೈನ್ಯವೇ ಸಾಕೆಂಬ ಗೊಡ್ಡು ನಂಬುಗೆ ಅವನಿಗಾದರೆ, ಹಗೆ ಸಾಧಿಸಬೇಕೆಂಬ ಕೋಪಾತುರದಲ್ಲಿ ಜಯಪುರಿ ಯಲ್ಲಿ ಸೈನ್ಯವೇನಿಲ್ಲದಿದ್ದರೂ ಅಮೃತಪುರಿಯ ಸೈನ್ಯವು ಬರಬಹುದೆಂಬುದು ಸ್ಫುರಿಸದೆ ಹೋಯಿತು ವೀರಸಿಂಹನಿಗೆ.

ಸರ್ಪದಂತನು ಆಚೆಗೆ ಹೋದ ಮೇಲೆ, ಆ ಸಂಗತಿ ವೀರಸಿಂಹನಿಗೆ ಸ್ಫುರಿಸಿತು. ಕೂಡಲೇ ಅವನು ಪಕ್ಕದಲ್ಲಿದ್ದ ಮಾಂತ್ರಿಕನೊಡನೆ, "ಏನಯ್ಯಾ, ನಮ್ಮ ಸೈನಿಕರು ಎಂಥವರನ್ನಾದರೂ ಇದಿರಿಸಿ ಹೋರಾಡುವ ಹಾಗೆ ಮಾಡಲು ಮಂತ್ರಶಕ್ತಿಯ ಸಾಧನೆ ಏನಾದರೂ ಇದೆಯೇ ?" ಎಂದನು.

"ಇಲ್ಲದೆ ಉಂಟೇ ಪ್ರಭೂ ? ಸೈನಿಕರು ಮಾತ್ರವಲ್ಲ, ಅವರ ಕುದುರೆಗಳು ಒಂದಡಿ ಕೂಡಾ ಹಿಂದಿಡಲಾಗದ ಹಾಗೆ, ಮುಂದಕ್ಕೇ ಹಾರುವ ಹಾಗೆ ಮಾಡಬಲ್ಲೆನು. ಕುದುರೆಗಳಿಗೆ ಹಾಕುವ ಮೇವಿನಲ್ಲಿ ಮಂತ್ರಜಲ ಹಾಕಿದರೆ ಸಾಕು. ಆ ಮೇವು ತಿಂದ ಕುದುರೆಗಳಿಗೆ ಜಲಪ್ರವಾಹ ನೋಡಿದರೂ, ಅಗ್ನಿ ಜ್ವಾಲೆ ಕಾಣಿಸಿದರೂ ಭಯಪಡಲಾರವು. ಕುದುರೆ ಗಳು ಹಿಂದಿರುಗದಿದ್ದರೆ ಸೈನಿಕರು ಹಿಂದೆ ಬರಲು ಸಾಧ್ಯವೇ ಹೇಳಿ !" ಎಂದನು ಆ ಮಂತ್ರವಾದಿ ಮಂದಹಾಸದಿಂದ ಉದ್ದವಾದ ಗಡ್ಡವನ್ನು ನೀವುತ್ತಾ.

"ಶಾಭಾಸ್ !" ಎಂದನು ವೀರಸಿಂಹ.

ಮಧ್ಯಾಹ್ನದ ಹೊತ್ತಿಗೆ ಸೈನ್ಯಗಳು ತಯಾ ರಾದುವು. ಸರ್ಪದಂತನೂ ಮಾಂತ್ರಿಕನೂ ಸಪ ಸೈನ್ಯದೊಂದಿಗೆ ಹೋದನು. ಸ್ವತಃ ವೀರಸಿಂಹನೇ



ಸೈನ್ಯವನ್ನು ನಡೆಯಿಸಿಕೊಂಡು ಹೋದನು. ಸಾಯಂ ಕಾಲದ ಹೊತ್ತಿನಲ್ಲಿ ಜಯಪುರದ ಸರಿಹದ್ದನ್ನು ಸೇರಿದರು.

ಆಗ ಮಾಂತ್ರಿಕನು, "ಪ್ರಭೂ, ನಾವು ಈ ರಾತ್ರಿಯಲ್ಲಿ ಇಲ್ಲಿಯೇ ತಂಗಿರುವುದು ಒಳ್ಳೇದು. ಮಂತ್ರಜಲ ಚೆಲ್ಲಿದ ಮೇವನ್ನು ಕುದುರೆಗಳಿಗೆ ಇಲ್ಲಿಯೇ ಹಾಕೋಣ. ಬೆಳಗಾಗುವಷ್ಟರಲ್ಲಿ ಒಂದೊಂದು ಕುದುರೆಗೆ ಐದು ಕುದುರೆಗಳ ಶಕ್ತಿ ಬರುತ್ತದೆ" ಎಂದನು.

ಹಾಗೆಯೇ ಮಾಡೋಣ. ಬೆಳಂಜಾವದಲ್ಲೇ ಹೊರಟು ಜಯಪುರಿಯನ್ನು . ಮುತ್ತೋಣ" ಎಂದನು ವೀರಸಿಂಹ.

ಆ ದಿನ ರಾತ್ರಿಯಲ್ಲಿ ಆ ಗಡ್ಡದ ಮಹಾ ಮಾಂತ್ರಿಕನು ನಿಷ್ಠೆಯಲ್ಲಿ ಕುಳಿತು ಏನೇನೋ ಮಂತ್ರಗಳನ್ನು ಪಠಿಸುತ್ತ, ಕಮಂಡಲುವಿನಂತಹ ದೊಡ್ಡ ಪಾತ್ರದಿಂದ ಮಂತ್ರಜಲವನ್ನು ಮೇವುಗಳ



ಮೇಲೆ ತಳಿದನು. ಆ ಮೇವನ್ನು ಕುದುರೆಗಳಿಗೆ ತಿನ್ನಿಸಲಾಯಿತು. ವೀರಸಿಂಹನಿಗೆ ಪರಮ ತೃಪ್ತಿ!

ಬೆಳಗಾಗುತ್ತಲೇ ವೀರಸಿಂಹನು ಕುದುರೆಯ ಮೇಲೇರಿ, ಸೈನಿಕರನ್ನು ನೋಡಿ, "ಈಗ ನಮ್ಮ ಕುದುರೆಗಳಿಗೆ ಅಪೂರ್ವವಾದ ಅಪಾರಶಕ್ತಿ ಮಂತ್ರದಿಂದ ಬಂದಿದೆ. ಯಾವ ತಲೆಕೊಂಬಿನವನು ಇದಿರಾದರೂ ವಿಜಯವು ನಮ್ಮದೇ. ಹುಂ! ಇನ್ನು ಧೈರ್ಯದಿಂದ ಮುಂದಕ್ಕೆ ಸಾಗಿರಿ!" ಎಂದು ಆಜ್ಞಾಪಿಸಿದನು.

ಆದರೆ ಅವನು ಏರಿದ ಕುದುರೆಯೇ ಮುಂದಕ್ಕೆ ಸಾಗದೆ ನಿಂತುಬಿಟ್ಟಿತ್ತು. ಅದನ್ನು ಮುಂದೆ ನಡೆಯುವಂತೆ ಮಾಡುವುದೇ ಕಷ್ಟವಾಯಿತು. ಕುದುರೆಯ ಬಲ ಏರಿತೆಂದುಕೊಂಡು ವೀರಸಿಂಹನು ಒಂದು ಕ್ಷಣ ಸಂತೋಷಪಟ್ಟನು. ಅಷ್ಟರಲ್ಲಿ ಕುದುರೆ ಮುಂಗಾಲುಗಳನ್ನೆತ್ತಿ ಒಂದುಸಾರಿ ವಿಚಿತ್ರ ಕಂಠದಿಂದ ಹೇಷಾರವ ಹೊರಡಿಸಿತು. ವೀರಸಿಂಹನು ಅನುಮಾನದಿಂದ ಹಿಂದಿರುಗಿ ನೋಡಿದನು. ಉಳಿದ ಸೈನಿಕರು ಕುದುರೆಗಳನ್ನು ಕದಲಿಸಲು ನಾನಾ ತಂಟೆಗಳನ್ನೂ ಅನುಭವಿಸುತ್ತಿದ್ದರು.

"ನುಗ್ಗಿರಿ ಮುಂದೆ!" ಎಂದು ಗರ್ಜಿಸಿದನು ವೀರಸಿಂಹ.

ಬಹು ಕಷ್ಟದಿಂದ ಆ ಕುದುರೇ ಸೈನ್ಯವು ಜಯಪುರಿಯ ರಾಜಭವನವನ್ನು ಸಮೀಪಿಸಿತು. ಇನ್ನು ರಾಜಭವನವನ್ನು ಸುತ್ತಿ ಮುತ್ತಬೇಕೆಂದಿರುವಾಗ, ಕುದುರೆಗಳಾವುದೂ ಸ್ವಲ್ಪವೂ ಕದಲದೆ ಮುಂಗಾಲುಗಳನ್ನೆತ್ತಿ ಭಯಂಕರವಾಗಿ ಹೇಷಾಧ್ವನಿ ಮಾಡಿದುವು. ಆಗ ಸೈನಿಕರೊಬ್ಬೊಬ್ಬರೂ ಕುದುರೆಯಿಂದ ಬಡಬಡನೆ ಕೆಳಗೆ ಬೀಳತೊಡಗಿದರು. ಕೆಲವರು ರಿಕಾಬಿನೊಳಗೆ ಪಾದಗಳು ಸಿಕ್ಕಿಕೊಂಡು, ತಲೆಕೆಳಗಾಗಿ ನೇತಾಡುತ್ತ ಮೈಪೂರಾ ಗಾಯಪಡಿಸಿಕೊಳ್ಳುವಂತಾಯಿತು.

"ಸರ್ಪದಂತಾ! ಏನಿದೆಲ್ಲಾ? ನೀನು ಕರೆತಂದ ಮಾಂತ್ರಿಕನು ಏನು ಮಾಡಿದ?" ಎಂದು ಕಿರಿಚಿದನು ವೀರಸಿಂಹ.

ಸರ್ಪದಂತನೂ, ವೀರಸಿಂಹನೂ ಕುದುರೆಯಿಂದ ಕೆಳಗೆ ಬೀಳದಿರಲು ಆಚೀಚೆ ಮಾಲುತ್ತಾ, ತಮ್ಮ ಪೂರ್ಣ ಬಲದಿಂದ ಪೇಚಾಡಿಕೊಳ್ಳುತ್ತಿದ್ದರು.

"ಎಲೋ! ದುರ್ಮಾರ್ಗಿಯೇ! ಇಲ್ಲಿ ನೋಡು!" ಎಂದು ಒಂದು ರಾಜ ಗಂಭೀರ ಸ್ವರವು ಕೇಳಿಸಿತು.

ವೀರಸಿಂಹನು ತಲೆ ಮೇಲೆತ್ತಿ ನೋಡಿದನು. ರಾಜಭವನದ ಮೇಲುಪ್ಪರಿಗೆಯಲ್ಲಿ ಕಾಣಿಸಿದ ಮಾಂತ್ರಿಕನು ತನ್ನ ಉದ್ದವಾದ ಗಡ್ಡದ ಕೂದಲನ್ನು ತಲೆಯ ಮೇಲಿಟ್ಟುಕೊಂಡು, ಅದರೊಳಗಿದ್ದ ತಲೆಯ ಕೂದಲ ರಾಶಿಯನ್ನೂ ಎತ್ತಿ ತಗೆದು ಬದಿಯಲ್ಲಿಡುತ್ತ, "ನನ್ನನ್ನು ಗುರುತಿಸಿದೆಯಾ?" ಎಂದು ಕೇಳಿದನು.

"ನೀನು...ನೀನು...ಶಾಂತಿದೇವನ ದುಷ್ಟಮಂತ್ರಿ! ಮೋಸದ ಮಂತ್ರೀ! ಮಾಂತ್ರಿಕನ ವೇಷದಲ್ಲಿ ನನ್ನನ್ನು ಮೋಸ ಮಾಡಿದಿಯಾ?" ಎಂದು ಹೂಂಕಾರಪೂರ್ವಕವಾಗಿ ಗುಡುಗಿದನು ವೀರಸಿಂಹ.

"ನಿಜವೇ, ನಾನು ನಿನ್ನನ್ನು ಮೋಸವೇ ಮಾಡಿದ್ದೇನೆ. ನಿನ್ನ ಕುದುರೆಗಳಿಗೆಲ್ಲಾ ಹುಚ್ಚು ಹಿಡಿಯುವ ಹಾಗೆ ಮಾಡಿದ್ದೇನೆ. ಧರ್ಮಾತ್ಮನಾದ ಶಾಂತಿದೇವ ಮಹಾರಾಜನಿಗೆ ನೀನು ಮಾಡಿದ ದ್ರೋಹದ ಮುಂದೆ ಇದು ಯಾವ ಮೂಲೆಗೆ? ಕೂಡಲೇ ಸೈನ್ಯಸಮೇತ ಶರಣಾಗು! ಇಲ್ಲದಿದ್ದರೆ ಒಬ್ಬನ ಪ್ರಾಣ ಕೂಡಾ ಉಳಿಯಲಾರದು" ಎಂದು ಎಚ್ಚರಿಕೆ ಕೊಟ್ಟನು ವೃದ್ಧ ಮಂತ್ರಿ.

"ಪ್ರಾಣ ಉಳಿಯದೇ? ವೃದ್ಧ ಮೊದ್ದನಾದ ನೀನೂ ಆ ಶಂಕರವರ್ಮನೂ ಕೂಡಿ ಸುಮೇಧ ಸೈನ್ಯದೊಂದಿಗೆ ನಮ್ಮ ಪ್ರಾಣಕ್ಕೆ ಎಚ್ಚರಿಕೆ ಹೇಳುವಿಯಾ? ಮತ್ತು ಮದ್ದು ಕುಡಿದ ಮುದಿ ಮೊದ್ದುಗಳೇ!" ಎಂದು ವೀರಸಿಂಹನು ಹೇಳನವಾಗಿ ನಕ್ಕನು.

"ಮೂರ್ಖನೇ! ಅತ್ತ ನೋಡು!" ಎಂದನು ವೃದ್ಧ ಮಂತ್ರಿ.

ಮರುಕ್ಷಣದಲ್ಲಿ ನೂರಾರು ಮಂದಿ ವೀರರು ಆಯುಧಧಾರಿಗಳಾಗಿ ಕೋಟೆಯ ಬುರುಜಿನ ಮೇಲೆ ಕಾಣಿಸಿದರು. ಇನ್ನೂ ಅನೇಕ ಸುಮೇಧದ ಸೈನಿಕರು ಬರುತ್ತಾ ಇದ್ದರು.

ಆ ದೃಶ್ಯವು ವೀರಸಿಂಹನ ಗುಂಡಿಗೆಯನ್ನು ಧಡಧಡಿಸಿತು.

ಆಗ ವೃದ್ಧ ಮಂತ್ರಿಯ ಹತ್ತಿರ ಬಂದ ಶಂಕರವರ್ಮನು, "ಎಲೋ ವೀರಸಿಂಹಾ! ರಕ್ತಪಾತವನ್ನು ನಿಲ್ಲಿಸಬೇಕೆಂತಲೇ, ನಾವು ನಿನ್ನನ್ನು ಕೆರಳಿಸಿ ಹುರುಡಿಸಿ ಸೈನ್ಯದೊಂದಿಗೆ ಬರುವ ಹಾಗೆ ಮಾಡಿದ್ದೇವೆ. ಧರ್ಮಪ್ರಭುವಾದ ಶಾಂತಿದೇವ ಮಹಾ



ರಾಜರ ಪುತ್ರನಾದ ಸಂದೀಪಕುಮಾರನ ಆದೇಶಾನುಸಾರವಾಗಿಯೇ ಈ ಪಥಕವನ್ನು ನಿಯೋಜಿಸಿದ್ದೇವೆ. ಪ್ರಾಣದ ಮೇಲೆ ಆಶೆ ಇದ್ದರೆ ಮರ್ಯಾದೆಯಿಂದ ಶರಣಾಗಿ ಬಿಡು. ಯುವರಾಜನ ಮುಂದೆ ಶರಣು ಬೇಡಿಕೋ. ಈಗ ನಿನ್ನ ಸೈನ್ಯವನ್ನೆಲ್ಲಾ ಅಮೃತಪುರಿಯ ಸೈನ್ಯವು ಮುತ್ತಿಕೊಂಡಿದೆ. ಶಾಂತಿಪುರದ ರಾಜಭವನ ಕೂಡಾ ಬಂಡಾಯದ ನಾಯಕನಾದ ವಸಂತನ ವಶದಲ್ಲಿದೆ. ಒಳ್ಳೆಯ ಮಾತಿನಲ್ಲಿ ಬಗ್ಗಿ ಬಿದ್ದು ಕ್ಷಮೆ ಕೇಳು!" ಎಂದನು ಗಂಭೀರದಿಂದ.

ವೀರಸಿಂಹನು ಒಂದು ಸಾರಿ ಸುತ್ತುಮುತ್ತಲೂ ನೋಡಿದನು. ಅನೇಕ ಮಂದಿ ಸೈನಿಕರು ಕುದುರೆಯಿಂದ ಕೆಳಗೆ ಬಿದ್ದು ನರಳಿಕೊಂಡಿದ್ದರು.

"ಓ! ಸುಮೇಧದ ಸೈನಿಕರೇ! ಅಲ್ಲಿ ನೋಡಿರಿ! ನಿಮ್ಮ ಒಡೆಯರಾದ ಶಾಂತಿದೇವ ಮಹಾರಾಜರ ಕುಮಾರರಾದ ಯುವರಾಜ ಸಂದೀಪಕುಮಾರರನ್ನು ನೋಡಿರಿ!" ಎಂದನು ಶಂಕರವರ್ಮ.

ಯುವರಾಜ ಸಂದೀಪಕುಮಾರನು ಶಂಕರವರ್ಮನ ಪಕ್ಕದಲ್ಲಿ ಬಂದು ನಿಂತನು.

"ಯುವರಾಜ ಸಂದೀಪಕುಮಾರನಿಗೆ ಜೈ! ಜೈ!" ಎಂದು ಜಯಜಯಧ್ವಾನ ಮಾಡಿದರು.

"ಶಹಭಾಸ್ ಸೈನಿಕರೇ! ನೀವೆಲ್ಲರೂ ಶರಣಾಗತರಾಗಿದ್ದೀರೆಂತಲೇ ಭಾವಿಸುತ್ತೇನೆ. ಎಲ್ಲರೂ ಆಯುಧಗಳನ್ನು ಕೆಳಗಿಟ್ಟು ಒಂದು ಬದಿಯಲ್ಲಿ ಹೋಗಿ ನಿಲ್ಲಿರಿ. ನೀವೆಲ್ಲಾ ಸುಮೇಧದ ಸೈನ್ಯದಲ್ಲಿಯೇ ಮುಂದುವರಿಯುವ ಹಾಗೆ ಮಾಡುತ್ತೇನೆ" ಎಂದು ಶಂಕರವರ್ಮನು ವೀರಸಿಂಹನ ಕಡೆಗೆ ತಿರುಗಿ, "ವೀರಸಿಂಹಾ! ಇದೇ ನಿನಗೆ ಕೊಡುವ ಕಡೇ ಎಚ್ಚರಿಕೆ! ಯುವರಾಜ ಸಂದೀಪ ಕುಮಾರನ ಮುಂದೆ ಶರಣಾಗಿ, ಪ್ರಜಾನೀಕದ ಮುಂದೆ ವಿಚಾರಣೆಗೆ ನಿಲ್ಲು. ಇಲ್ಲದಿದ್ದರೆ ನಿನ್ನ ಪ್ರಾಣ ಉಳಿಯದು!" ಎಂದನು.

ವೀರಸಿಂಹನು ಚಿಂತಿಸುತ್ತ ಏನೋ ಆಲೋಚಿಸುತ್ತಿರುವಾಗ ಅವನು ಏರಿಕೊಂಡಿದ್ದ ಕುದುರೆ ಮುಂಗಾಲುಗಳನ್ನೆತ್ತಿ ಶರೀರವನ್ನು ಕುಲುಕಿದ ಕೂಡಲೇ ಅವನು ದಭೀರನೆ ನೆಲಕ್ಕೆ ಬಿದ್ದನು. ಕುದುರೆ ಓಡಿಹೋಯಿತು.

ಶಂಕರವರ್ಮನ ಅಂಗರಕ್ಷಕರು ವೀರಸಿಂಹನನ್ನು ಬಂಧಿಸಿ ಸೆರೆಮನೆಗೆ ನಡೆಸಿಕೊಂಡು ಹೋದರು.

ಸರ್ಪದಂತನು ಆಯುಧವನ್ನು ಕೆಳಗೆ ಹಾಕಿ ಶರಣೆಂಬಂತೆ ಕೈಗಳನ್ನು ಮೇಲೆತ್ತಿದನು.

ಯುವರಾಜ ಸಂದೀಪನನ್ನು ತಾತನಾದ ಅಮೃತಪುರಿಯ ರಾಜ ಸತ್ಯಸೇನನು ನೋಡಿ ಆನಂದಬಾಷ್ಪ ಸುರಿಸಿದನು. ಕ್ರೂರನಾದ ವೀರಸಿಂಹನ ಅರಾಜಕತೆಯಿಂದ, ಅಟ್ಟಹಾಸಗಳಿಂದ ಬಿಡುಗಡೆಯಾದುದರಿಂದ, ಸುಮೇಧ ರಾಜ್ಯದ ಪ್ರಜೆಗಳು ಆನಂದೋತ್ಸವ ನಡೆಸಿಕೊಂಡರು.

ಜಯಾನಂದ ಮುನಿಯ ಸಮಕ್ಷಮದಲ್ಲಿ ಸಂದೀಪ ಕುಮಾರನಿಗೆ ಸುಮೇಧ ರಾಜ್ಯದ ಪಟ್ಟಾಭಿಷೇಕವು ಬಹು ವೈಭವದಿಂದ ನಡೆಯಿತು. ಸಂದೀಪನು ತನ್ನ ಪರಿವಾರದೊಂದಿಗೆ ಅರಣ್ಯಕ್ಕೆ ಹೋಗಿ ತಾಯಿ ತಂದೆಯರ ಸಮಾಧಿಗಳಿಗೆ ನಮಸ್ಕರಿಸಿ, ಅಲ್ಲಿ ಸ್ಮಾರಕ ಮಂದಿರಗಳನ್ನು ಕಟ್ಟಿಸಲು ಏರ್ಪಾಡು ಮಾಡಿದನು.

ಅನಂತರ ಬಂದ ಸುಮುಹೂರ್ತದಲ್ಲಿ ಸಂದೀಪನಿಗೆ ಸುಕನ್ಯೆಯೊಂದಿಗೆ ವಿವಾಹ ಮಹೋತ್ಸವವೂ ನಡೆಯಿತು. ಅಮೃತಪುರಿ ಮತ್ತು ಜಯಪುರಿ ರಾಜ್ಯಗಳು ವಾರಸರಿಲ್ಲದ್ದರಿಂದ ಆ ಎರಡು ರಾಜ್ಯಗಳೂ ಸುಮೇಧದೊಂದಿಗೆ ಕೂಡಿ, ಸಂದೀಪಾ ಸುಕನ್ಯೆಯರು ಸುಮೇಧ ಸಾಮ್ರಾಜ್ಯದ ರಾಜಾರಾಣಿಯರಾಗಿ ಒಳ್ಳೆಯ ಹೆಸರು ಪಡೆಯುತ್ತ ಚಿರಕಾಲ ಬಾಳಿದರು. —(ಮುಗಿಯಿತು)



Scanned by CamScanner